RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಫೆಬ್ರವರಿ ೭, ೨೦೧೩ (ಮಾಘ ೧೮, ಶಕ ವರ್ಷ ೧೯೩೪)<br>Bangalore, Thursday, February 7, 2013 (Magha 18, Shaka Varsha 1934) | ಸಂಚಿಕೆ ೬<br>Issue 6 |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆಡಳಿತಾಧಿಕಾರಿಗಳು, ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಕೃಷ್ಣಾ ಮೇಲ್ದಂಡೆ ಯೋಜನೆ, ಭೀಮರಾಯನಗುಡಿ

ಇವರ ನಡವಳಿಗಳು

**ವಿಷಯ :** ಶ್ರೀ ರಾಮಣ್ಣ ತಂ. ಗುರಪ್ಪ ಕಮ್ಮಾರ, ಕಾವಲುಗಾರ ಇವರ ಅನಧಿಕೃತ ಗೈರುಹಾಜರಿ ಮತ್ತು ಶಿಸ್ತು ಕ್ರಮ ಜರುಗಿಸಿ, ಕೆಲಸದಿಂದ ತೆಗೆದುಹಾಕುವ ಬಗ್ಗೆ

**ಉಲ್ಲೇಖ:**

1. ಈ ಕಾರ್ಯಾಲಯದ ಸುತ್ತೋಲೆ ಸಂ : ಕಾಡಾ/ಸಿ–1/90/05–06/3460 ದಿನಾಂಕ : 22–10–09
2. ಸ.ಕಾ.ನಿ.ಅಂ.ರು, ಕೃಭಾಜನಿನಿ, ಹೊಲಗಾಲುವೆ ಉಪ ವಿಭಾಗ ಸಂ : 16, ರಾಂಪೂರ ಇವರ ಪತ್ರ ಸಂ : ಕೃಭಾಜನಿನಿ/ಹೊಗಾಉವಿ–16/ರಾಂಪೂರ/ಸಿ–2/ಕ್ಯಾಂಪ್ ಭೀ.ಗುಡಿ, ದಿನಾಂಕ : 11–11–2009.
3. ಈ ಕಾರ್ಯಾಲಯದ ಆದೇಶ ಸಂ : ಕಾಡಾ/ಸಿ–2/32/ಅನಧಿಕೃತ ಗೈರುಹಾಜರಿ/09–10/4725, ದಿನಾಂಕ : 16–12–09.
4. ಕಾ.ನಿ.ಅಂ.ರು, ಕೃಭಾಜನಿನಿ, ಹೊಲಗಾಲುವೆ ವಿಭಾಗ ಸಂ. 4, ಆಲಮೇಲ ಇವರ ಪತ್ರ ಸಂ : ಕೃಭಾಜನಿನಿ/ಹೊವಿ–4/ಇತರೆ/09–10/1392, ದಿನಾಂಕ : 26–9–2010.
5. ಈ ಕಾರ್ಯಾಲಯದ ಕಾರಣ ಕೇಳುವ ನೋಟೀಸು ಸಂ.ಕಾಡಾ/ಸಿ–2/32/ಅಗೈಹಾ/09–10/592–93, ದಿನಾಂಕ : 13–5–2010.
6. ಸ.ಕಾ.ನಿ.ಅಂ.ರು, ಕೃಭಾಜನಿನಿ, ಹೊಲಗಾಲುವೆ ಉಪ ವಿಭಾಗ ಸಂ : 16, ರಾಂಪೂರ ಇವರ ಪತ್ರ ಸಂ : ಕೃಭಾಜನಿನಿ/ಹೊಗಾಉವಿ–16/ರಾಂಪೂರ/ಸಿ–2/10–11/211, ದಿನಾಂಕ : 24–9–10
7. ಸದರ ಸಂ. 231, ದಿನಾಂಕ : 12–10–2010.
8. ಈ ಕಾರ್ಯಾಲಯದ ಆದೇಶ ಸಂ : ಸಿ–2/32/ಅಗೈಹಾ/09–10/4134, ದಿನಾಂಕ : 30–10–2010 ಮಂಡನಾಧಿಕಾರಿ ಮತ್ತು ಇಲಾಖಾ ವಿಚಾರಣಾಧಿಕಾರಿಗಳ ನೇಮಕ.
9. ವಿಚಾರಣಾಧಿಕಾರಿಗಳು ಹಾಗೂ ಕಾ.ನಿ.ಅಂ.ರು, ಹೊಲಗಾಲುವೆ ವಿಭಾಗ ಸಂ : 3, ಕೃಭಾಜನಿನಿ, ಆಲಮಟ್ಟಿ ಇವರ ಪತ್ರ ಸಂ : ಕೃಭಾಜನಿನಿ/ಹೊವಿ–3/ಸಿಬ್ಬಂದಿ/ಇ.ವಿ/10–11/1213, ದಿನಾಂಕ : 30–12–2010 (ವಿಚಾರಣಾ ವರದಿ).
10. ಈ ಕಾರ್ಯಾಲಯದ ದ್ವಿತೀಯ ಕಾರಣ ಕೇಳುವ ನೋಟೀಸು ಸಂ : ಕಾಡಾ/ಸಿ–2/32/ಅಗೈಹಾ/ 09–10/5313, ದಿನಾಂಕ : 2–2–2011.
11. ಸ.ಕಾ.ನಿ.ಅಂ.ರು, ಕೃಭಾಜನಿನಿ, ಹೊಲಗಾಲುವೆ ಉಪ ವಿಭಾಗ ಸಂ : 16, ರಾಂಪೂರ ಇವರ ಪತ್ರ ಸಂ :ಕೃಭಾಜನಿನಿ/ಹೊಗಾಉವಿ–16/ಸಿ–2/10–11/335, ದಿನಾಂಕ : 14–2–11.
12. ಶ್ರೀ ರಾಮಣ್ಣ ತಂ. ಗುರಪ್ಪ ಕಮ್ಮಾರ, ಕಾವಲುಗಾರ ಇವರ ಮನವಿ ದಿನಾಂಕ : 15–2–11
13. ಈ ಕಾರ್ಯಾಲಯದ ಪತ್ರ ಸಂ :ಕಾಡಾ/ಸಿ–2/32/09–10/2758, ದಿನಾಂಕ : 9–9–11
14. ಸ.ಕಾ.ನಿ.ಅಂ.ರು, ಕೃಭಾಜನಿನಿ, ಹೊಲಗಾಲುವೆ ಉಪ ವಿಭಾಗ ಸಂ : 16, ರಾಂಪೂರ ಇವರ ಪತ್ರ ಸಂ : ಕೃಭಾಜನಿನಿ/ಹೊಗಾಉವಿ–16/ಸಿ–2/11–12/189, ದಿನಾಂಕ : 15–9–11.
15. ಈ ಕಾರ್ಯಾಲಯದ ಆದೇಶ ಸಂ : ಕಾಡಾ/ಸಿ–1/71/05–06/467, ದಿನಾಂಕ : 19–4–2007.

**ಪ್ರಸ್ತಾವನೆ :**

ಉಲ್ಲೇಖ–1ರ ಈ ಕಾರ್ಯಾಲಯದ ಸುತ್ತೋಲೆ ದಿನಾಂಕ : 22–10–2009ರ ಮೂಲಕ ಈ ಪ್ರಾಧಿಕಾರದ ಅಧೀನ ಕಾರ್ಯಾಲಯಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳು ದೀರ್ಘಕಾಲದಿಂದ ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರು ಇರುವ ಪ್ರಕರಣದಲ್ಲಿ ಕೆಲಸಕ್ಕೆ ಮರು ಹಾಜರಾತಿ ಪಡಿಸಿಕೊಳ್ಳುವ ಮತ್ತು ಇಲಾಖಾ ವಿಚಾರಣೆ ಪ್ರಕರಣಗಳಿಗೆ ಸಂಬಂಧಿಸಿದಂತೆ ಅಧಿಕಾರಿ/ಸಿಬ್ಬಂದಿಯವರ ಸೇವಾ ಪುಸ್ತಕ ಮತ್ತು ಪ್ರಮಾಣ ಪತ್ರವನ್ನು ದೃಢೀಕರಣದೊಂದಿಗೆ ಸಲ್ಲಿಸಲು ತಿಳಿಸಲಾಗಿದೆ. ಸದರಿ ಸುತ್ತೋಲೆಯಂತೆ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪ ವಿಭಾಗ ಸಂ : 16, ಕೃ.ಭಾ.ಜ.ನಿ.ನಿ. ರಾಂಪೂರ ಇವರು ಉಲ್ಲೇಖ–2 ರ ಪತ್ರದ ಮೂಲಕ ಶ್ರೀ ರಾಮಣ್ಣ ತಂ. ಗುರಪ್ಪ ಕಮ್ಮಾರ, ಕಾವಲುಗಾರ ಇವರು ದಿನಗೂಲಿ ಸೇವೆಯಿಂದ ಸಕ್ರಮಗೊಂಡು ಸದರಿ ಕಾರ್ಯಾಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಇವರು ದಿನಾಂಕ : 3–4–2009 ರಿಂದ 11–11–2009ರ ವರೆಗೆ ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಿದ್ದು, ಕೆಲಸಕ್ಕೆ ಮರು ಹಾಜರುಪಡಿಸಿಕೊಳ್ಳಲು ಕೋರಿರುವುದಿಲ್ಲವೆಂದು ಪ್ರಮಾಣ ಪತ್ರದೊಂದಿಗೆ ವರದಿ ಸಲ್ಲಿಸಿರುವರು. ಸದರಿ ವರದಿಯನ್ನು ಪರಿಶೀಲಿಸಿ ಉಲ್ಲೇಖ–3ರ ಈ ಕಾರ್ಯಾಲಯದ ಆದೇಶದ ಮೂಲಕ ಸರಕಾರದ ಅಧಿಕೃತ ಜ್ಞಾಪನಾ ಸಂ: ಡಿಪಿಎಆರ್/3/ಎಸ್‌ಡಿಇ/94, ದಿನಾಂಕ : 26–2–1994ರಂತೆ ಕಾರ್ಯಾಲಯದ ಕೆಲಸಗಳಿಗೆ ಅನಧಿಕೃತ ಗೈರುಹಾಜರು ಇರುವುದರಿಂದ, ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ, ನಿಯಮ–10ರಡಿ ಪ್ರದತ್ತವಾದ ಅಧಿಕಾರದಂತೆ ಶ್ರೀ ರಾಮಣ್ಣ ತಂ. ಗುರುಪ್ಪ ಕಮ್ಮಾರ, ಕಾವಲುಗಾರ ಇವರನ್ನು ಅಮಾನತ್ತಿನಲ್ಲಿಡಲಾಗಿದೆ.

ಉಲ್ಲೇಖ–4ರಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ವಿಭಾಗ ಸಂ : 4, ಕೃ.ಭಾ.ಜ.ನಿ.ನಿ. ಆಲಮೇಲ ಇವರು ಸದರಿ ನೌಕರರ ವಿರುದ್ಧ ಆರೋಪ ಪಟ್ಟಿಗಳನ್ನು ಅನುಬಂಧ–1 ರಿಂದ 4ರಲ್ಲಿ ತಯಾರಿಸಿ ಅನುಮೋದನೆಗಾಗಿ ಸಲ್ಲಿಸಿರುವುದನ್ನು ಪರಿಶೀಲಿಸಿ ಉಲ್ಲೇಖ–5ರ ಈ ಕಾರ್ಯಾಲಯದ ಪತ್ರದ ಮೂಲಕ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–11ರ ಮೇರೆಗೆ ಶಿಸ್ತು ಕ್ರಮ ಜರುಗಿಸುವ ಕುರಿತು ಕಾರಣ ಕೇಳುವ ನೋಟೀಸಿನೊಂದಿಗೆ ಆಪಾದನಾ ಪಟ್ಟಿ 1 ರಿಂದ 4 ರಲ್ಲಿ ಜಾರಿ ಮಾಡಿ 15 ದಿವಸಗಳಲ್ಲಿ ಆರೋಪಗಳ ಕುರಿತು ರಕ್ಷಣಾತ್ಮಕ ಲಿಖಿತ ಹೇಳಿಕೆಯನ್ನು ಕಾರ್ಯಾಲಯದ ಮುಖ್ಯಸ್ಥರ ಮೂಲಕ ಸಲ್ಲಿಸಲು ಅಥವಾ ಮೌಖಿಕವಾಗಿ ಹೇಳಲು ಸಹ ಸದರಿ ನೌಕರರಿಗೆ ಅವಕಾಶ ನೀಡಲಾಗಿತ್ತು. ಉಲ್ಲೇಖ–6 ರಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪ ವಿಭಾಗ ಸಂ : 16, ಕೃ.ಭಾ.ಜ.ನಿ.ನಿ. ರಾಂಪೂರ ಇವರು ಸದರಿ ನೋಟೀಸು ಮತ್ತು ಆರೋಪ ಪಟ್ಟಿಗಳನ್ನು ಆಪಾದಿತರಿಗೆ ಜಾರಿಗೊಳಿಸಿ ಅವರಿಂದ ದಿನಾಂಕ : 18–9–2010 ರಂದು ಸ್ವೀಕೃತಿ ಪಡೆದು ಸಲ್ಲಿಸಿರುವರು. ಉಲ್ಲೇಖ–7ರ ಮೂಲಕ ಸಹಾಯಕ ಕಾರ್ಯನಿರ್ವಾಹಕ ಅಭಿಯಂತ ರವರು ಆಪಾದಿತ ನೌಕರರು ಆರೋಪಗಳಿಗೆ ಸಲ್ಲಿಸಿದ ವಿವರಣೆಯನ್ನು ಈ ಕಾರ್ಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ಆಪಾದಿತ ನೌಕರರು ದಿನಾಂಕ : 30–9–2010ರ ವಿವರಣೆಯಲ್ಲಿ ಆರೋಗ್ಯ ಸ್ಥಿತಿ ಸರಿ ಇರದ ಕಾರಣ ಕಾರ್ಯಾಲಯದ ಕೆಲಸಕ್ಕೆ ಹಾಜರಾಗಿರುವುದಿಲ್ಲ ಮತ್ತು ಕಾರ್ಯಾಲಯದಿಂದ ಬಂದ ಪತ್ರಗಳು ಮನೆಯಲ್ಲಿ ಯಾರೂ ಇರದ ಪ್ರಯುಕ್ತ ಮರಳಿ ಹೋಗಿರುತ್ತವೆ. ಮತ್ತು ದಿನಾಂಕ : 16–6–2010 ರಂದು ಬಂದ ಕಾರ್ಯಾಲಯದ ಪತ್ರಕ್ಕೆ ಸೇರಿದ್ದು, ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗದಿರುವ ತಪ್ಪನ್ನು ಕ್ಷಮಿಸಿ ಕಛೇರಿ ಕೆಲಸಕ್ಕೆ ಹಾಜರು ಪಡಿಸಿಕೊಳ್ಳಲು ಮತ್ತು ಇನ್ನು ಮುಂದೆ ತಪ್ಪನ್ನು ಮಾಡಿದರೆ ಶಿಸ್ತು ಕ್ರಮ ಜರುಗಿಸಲು ವಿನಂತಿಸಿಕೊಂಡಿರುತ್ತಾರೆ. ಸದರಿ ನೌಕರರು ಮನವಿಯಲ್ಲಿ ವಿನಂತಿಸಿಕೊಂಡಿರುವಂತೆ, ಇದೂವರೆಗೂ ಕಛೇರಿ ಕೆಲಸಕ್ಕೆ ಹಾಜರಾಗಿರುವುದಿಲ್ಲವೆಂದು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ವರದಿ ಸಲ್ಲಿಸಿರುವರು.

ಉಲ್ಲೇಖ–8ರ ಈ ಕಾರ್ಯಾಲಯದ ಆದೇಶದ ಮೂಲಕ ಸದರಿ ನೌಕರರು ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರು ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ, ನಿಯಮ–11(5) ರಂತೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳು ಮತ್ತು ಮಂಡನಾಧಿಕಾರಿಯನ್ನು ನೇಮಿಸಲಾಗಿದೆ. ಉಲ್ಲೆಖ–9ರಂತೆ ವಿಚಾರಣಾಧಿಕಾರಿಗಳು ಈ ಕಾರ್ಯಾಲಯದ ಆದೇಶದಂತೆ ಶ್ರೀ ರಾಮಣ್ಣ ತಂ. ಗುರಪ್ಪ ಕಮ್ಮಾರ, ಕಾವಲುಗಾರ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಸದರಿ ನೌಕರರು ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರು ಇರುವುದನ್ನು ಒಪ್ಪಿಕೊಂಡಿರುವುದರಿಂದ ಮತ್ತು ಸದರಿ ನೌಕರರ ಮೇಲೆ ಮಾಡಲಾದ ಆರೋಪಗಳು ಸಾಬೀತಾಗಿರುವುದಾಗಿ ತಿಳಿಸಿ, ವಿಚಾರಣಾ ವರದಿಯನ್ನು ಸಲ್ಲಿಸಿರುವರು. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣೆ ವರದಿಯನ್ನು ಉಲ್ಲೇಖ–10ರಂತೆ ಆರೋಪಿತ ನೌಕರನಿಗೆ ದ್ವಿತೀಯ ಕಾರಣ ಕೇಳುವ ನೋಟೀಸು ಜಾರಿ ಮಾಡಿ ವಿಚಾರಣಾ ವರದಿ ಒಪ್ಪಿಕೊಳ್ಳುವ/ತಿರಸ್ಕರಿಸುವ ಕುರಿತು ವಿವರಣೆಯನ್ನು ಒಂದು ವಾರದೊಳಗಾಗಿ ಸಲ್ಲಿಸಲು ಸೂಚಿಸಿ ಕಾಲಾವಕಾಶ ನೀಡಲಾಗಿತ್ತು. ಉಲ್ಲೇಖ–11 ರಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪ ವಿಭಾಗ ಸಂ. 16, ಕೃ.ಭಾ.ಜ.ನಿ.ನಿ. ರಾಂಪೂರ ಇವರು ಈ ಕಾರ್ಯಾಲಯದಿಂದ ಜಾರಿಗೊಳಿಸಿದ ನೋಟೀಸನ್ನು ಆರೋಪಿತ ನೌಕರರು ಸ್ವೀಕರಿಸಿದ ದಿನಾಂಕದೊಂದಿಗೆ ರುಜು ಪಡೆದು ಈ ಕಾರ್ಯಾಲಯಕ್ಕೆ ಸಲ್ಲಿಸಿರುತ್ತಾರೆ. ಉಲ್ಲೇಖ–12ರಂತೆ ಸದರಿ ನೌಕರನು ನೇರವಾಗಿ ಈ ಕಾರ್ಯಾಲಯಕ್ಕೆ ಮನವಿ ಅರ್ಜಿ ಸಲ್ಲಿಸಿ, ಮಾಡಿದ ತಪ್ಪುಗಳನ್ನು ಅಧಿಕಾರಿಗಳ ಸಮಕ್ಷಮ ಒಪ್ಪಿಕೊಂಡಿರುವುದಾಗಿ ತಿಳಿಸಿ, ಇನ್ನು ಮುಂದೆ ಈ ರೀತಿ ತಪ್ಪಾಗದಂತೆ ನಿಗಾವಹಿಸುತ್ತೇನೆ, ದಯಾಳುಗಳು ಕರುಣೆ ತೋರಿಸಿ ಕರ್ತವ್ಯಕ್ಕೆ ಹಾಜರುಪಡಿಸಿಕೊಳ್ಳಲು ಅರಿಕೆ ಮಾಡಿಕೊಂಡಿರುವರು. ಉಲ್ಲೇಖ–13ರ ಈ ಕಾರ್ಯಾಲಯದ ಪತ್ರದ ಮೂಲಕ ಸದರಿ ನೌಕರನು ನೇರವಾಗಿ ಈ ಕಾರ್ಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಕ್ಕೆ 6 ಅಂಶಗಳಿಗೆ ಮಾಹಿತಿಯನ್ನು ಸಲ್ಲಿಸಲು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರಿಗೆ ತಿಳಿಸಲಾಗಿದೆ.

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಉಲ್ಲೇಖ–14ರ ಮೂಲಕ ಶ್ರೀ ರಾಮಣ್ಣ ತಂ. ಗುರಪ್ಪ ಕಮ್ಮಾರ, ಕಾವಲುಗಾರ ಇವರು ದಿನಾಂಕ : 3–4–2007 ರಿಂದ ಇಂದಿನವರೆಗೆ ಅನಧಿಕೃತ ಗೈರುಹಾಜರಾಗಿದ್ದು, ಕಾರ್ಯಾಲಯಕ್ಕೆ ಹಾಜರಾಗಿರುವುದಿಲ್ಲ. ಮತ್ತು ಯಾವುದೇ ಮನವಿ ಸಲ್ಲಿಸಿರುವುದಿಲ್ಲ. ಹಾಗೂ ಸದರಿಯವರು ನಿಲಂಬನಾ ಅವಧಿ ಸೇರಿ ಕೇಂದ್ರ ಸ್ಥಾನದಲ್ಲಿ ಇಲ್ಲದಿರುವುದರಿಂದ ಯಾವುದೇ ಜೀವನ ನಿರ್ವಹಣಾ ಭತ್ಯೆ ನೀಡಿರುವುದಿಲ್ಲವೆಂದು ತಿಳಿಸಿರುವರು.

ವಿಚಾರಣಾ ವರದಿ ಮತ್ತು ದಾಖಲೆಗಳಂತೆ ಸದರಿ ನೌಕರರಿಗೆ ಸರಕಾರದ ಕೆಲಸಗಳಲ್ಲಿ ಆಸಕ್ತಿ ಇಲ್ಲವೆಂದು ಸಾಬೀತಾಗಿರುತ್ತದೆ. ಮತ್ತು ಸದರಿ ನೌಕರರು ಇಂದಿನವರೆಗೆ ಅನಧಿಕೃತ ಗೈರುಹಾಜರಿಯಲ್ಲಿ ಮುಂದುವರೆದಿರವುದರಿಂದ, ಸ್ವಯಂ ಕೆಲಸವನ್ನು ಪರಿತ್ಯಜಿಸಿದಂತಾಗಿದೆ. ಈ ಹಿಂದೆ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದರಿಂದ ಮತ್ತು ಕರ್ತವ್ಯದಲ್ಲಿ ಬೇಜವಾಬ್ದಾರಿಯಿಂದ ನಡೆದುಕೊಂಡು ಹಾಗೂ ಮೇಲಾಧಿಕಾರಿಗಳ ನಿರ್ದೇಶನಗಳನ್ನು ಪಾಲಿಸದೆ ಇರುವುದಕ್ಕೆ ಉಲ್ಲೇಖ–15ರ ಈ ಕಾರ್ಯಾಲಯದ ಆದೇಶದ ಮೂಲಕ ಕೆ.ಸಿ.ಎಸ್. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ–1957ರ, ನಿಯಮ 8(1)ರ ಪ್ರಕಾರ ವಾಗ್ದಂಡನೆ ವಿಧಿಸಲಾಗಿದೆ. ಆದಾಗ್ಯೂ ಸದರಿ ನೌಕರರು ಮತ್ತೆ ಕಛೇರಿ ಕೆಲಸದಿಂದ ಅನಧಿಕೃತ ಗೈರುಹಾಜರಿಯನ್ನು ಮುಂದುವರೆಸಿರುವುದರಿಂದ ಮತ್ತು ಮೇಲಿನ ಕಾರಣಗಳಿಂದ ಸದರಿಯವರು ವಿಚಾರಣಾ ವರದಿಗೆ ಸಲ್ಲಿಸಿರುವ ಮನವಿಯನ್ನು ತಿರಸ್ಕರಿಸಲಾಗಿದೆ.

ಆದ್ದರಿಂದ, ಸದರಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ–1957ರ, ನಿಯಮ–8 ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ನಾಗರೀಕ ಸೇವಾ ನಿಯಮ–108ರ ಪ್ರಕಾರ ಮತ್ತು ಸರಕಾರದ ಸುತ್ತೋಲೆ ದಿನಾಂಕ : 14–9–2001ರಲ್ಲಿ 4 ತಿಂಗಳು ಅವಧಿಗಿಂತ ಹೆಚ್ಚಿಗೆ ಅನಧಿಕೃತ ಗೈರುಹಾಜರು ಇದ್ದಲ್ಲಿ ತೆಗೆದುಹಾಕುವ ದಂಡನೆಗೆ ಗುರಿಯಾಗಿರುತ್ತಾರೆ. ಕಾರಣ, ಸರಕಾರ/ಪ್ರಾಧಿಕಾರದ ಸೇವೆಯಿಂದ ತೆಗೆದುಹಾಕಲು ನಿರ್ಧರಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂ : ಕಾಡಾ/ಸಿ–2/32/ಅಗೈಹಾ/09–10/1756, ದಿನಾಂಕ : 9ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಹೊಲಗಾಲುವೆ ಉಪ ವಿಭಾಗ ಸಂ. 16, ಕೃ.ಭಾ.ಜ.ನಿ.ನಿ. ರಾಂಪೂರ ಇವರ ಕಾರ್ಯಾಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಶ್ರೀ ರಾಮಣ್ಣ ತಂ. ಗುರಪ್ಪ ಕಮ್ಮಾರ, ಕಾವಲುಗಾರ ಇವರು ದಿನಾಂಕ: 3–4–2007 ರಿಂದ ಇಂದಿನವರೆಗೆ ದೀರ್ಘಕಾಲ ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರು ಇರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ–8(viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ (ಕರ್ನಾಟಕ ನಾಗರೀಕ ಸೇವಾ ನಿಯಮ–108ರನ್ವಯ) ದಿನಾಂಕ : 3–4–2007 ರಿಂದ ಜಾರಿಗೆ ಬರುವಂತೆ ಸರಕಾರದ/ಕೃಷ್ಣಾ ಕಾಡಾ ಪ್ರಾಧಿಕಾರದ ಸೇವೆಯಿಂದ ತೆಗೆದುಹಾಕಿ ದಂಡನೆ ವಿಧಿಸಿ ಆದೇಶಿಸಲಾಗಿದೆ.

**ಮುನೀಶ್ ಮೌದಗೀಲ್, ಭಾ.ಆ.ಸೇ.**
ಆಡಳಿತಾಧಿಕಾರಿಗಳು ಮತ್ತು ಶಿಸ್ತು ಪ್ರಾಧಿಕಾರಿಗಳು,
ಕೃಷ್ಣಾ ಕಾಡಾ, ಭೀಮರಾಯನಗುಡಿ.

**P.D. 2**

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

### ಅಧಿಸೂಚನೆ

**ಕ್ರಮಾಂಕ : ಕಗೃಮಂ/ಭೂಸ್ವಾವಿ/04/10–11, ದಿನಾಂಕ : 20–10–2012.**

ಕರ್ನಾಟಕ ಭೂಸ್ವಾಧೀನ ಕಾಯ್ದೆ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ 46) ರಲ್ಲಿ ವಿಧಿತವಾದ ಅಧಿಕಾರದಂತೆ ಹಾಗೂ ಕರ್ನಾಟಕ ಜನರಲ್ ಕ್ಲಾಸ್ ಆಕ್ಟ್ 1897 (iii ಆಫ್ 1889 ಕಲಂ 21) ರ ಅನ್ವಯ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಸಂಡೂರು ಹೋಬಳಿ, ದೌಲತ್‌ಪುರ ಗ್ರಾಮದಲ್ಲಿ ಜಮೀನು ಸ್ವಾಧೀನಪಡಿಸಿಕೊಳ್ಳಲು ಈ ಕಛೇರಿಯಿಂದ ಹೊರಡಿಸಲಾಗಿದ್ದ 4(1)ರ ಅಧಿಸೂಚನೆ ಸಂಖ್ಯೆ : ಕಗೃಮಂ ಭೂಸ್ವಾವಿ/04/10–11, ದಿನಾಂಕ : 5–2–2011 ರ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದ ಭಾಗ–3 ಪುಟ 2077 ರಿಂದ 2080 ರವರೆಗೆ ದಿನಾಂಕ : 14–7–2011 ರಂದು ಪ್ರಕಟವಾಗಿದ್ದು, ದಿನಾಂಕ : 21–7–2012 ರ ಮಂಡಳಿ ಸಭೆಯ ನಿರ್ಣಯದಂತೆ, ಬಳ್ಳಾರಿ ಜಿಲ್ಲೆ, ಸಂಡೂರು ಹೋಬಳಿ, ದೌಲತ್‌ಪುರ ಗ್ರಾಮದಲ್ಲಿನ ಜಮೀನನ್ನು ಭೂಸ್ವಾಧೀನದಿಂದ ಕೈ ಬಿಟ್ಟು ಸದರಿ ಪ್ರಕಟಣೆಗಳನ್ನು ಹಿಂತೆಗೆದುಕೊಳ್ಳಲಾಗಿದೆ.

**ಗೃಹ ಆಯುಕ್ತರು,**
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

**P.D. 3**

## FORM 152

**(See Rule 315)**

**Member's Voluntary Winding up**

**Notice of appointment of liquidator pursuant to section 516**

**Name of Company : BG2 Habitat India Private Limted**

Nature of Business : To engage in real estate, construction and allied businesses including to acquire land, building and other immovable properties or any interest therein by purchase or otherwise and to sell, lease, gift, license any land, building, immovable property, or any interest thereon to carry on all or any other business of designing, planning, managing, developing ; on joint development basis or otherwise ; construction of independent residential villas, duplex houses, multi-storied building, group housing, hotels, information technology/business parks, real estate projects, service apartments, business centers, townships, housing, etc.

Presented by : Jain Christopher, Srikanth, Srikanth and Associates

To

The Registrar of Companies,

'E' Wing, 2nd Floor, Kendriya Sadana Koramangala, Bangalore-560 034.

We, M/s. Jain, Christopher, Srikanth, Srikanth & Associates, Chartered Accountants, 2nd Floor, Uniworth Plaza, #20 Sankey Road, Bangalore-560 020, hereby give notice that we have been appointed liquidator of M/s. BG2 Habitat India Private Limited by an ordinary resolution of the Company, dated March 5, 2012.

Dated the 5th day of March, 2012.

**Liquidator**
(For M/s. Jain, Christopher, Srikanth, Srikanth & Associates)

**P.D. 1**

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

**ಭೂಸ್ವಾಧೀನ ಕಾಯ್ದೆ ಕಲಂ. 4(1) ಕರ್ನಾಟಕ ತಿದ್ದುಪಡಿ ಕಾಯ್ದೆ 33/91 ರ ಅನ್ವಯ ಅಧಿಸೂಚನೆ**

**ಕ್ರಮಾಂಕ : ಕಗೃಮಂ./ಭೂಸ್ವಾವಿ/ಗುಲಬರ್ಗಾ/03/2012–13, ದಿನಾಂಕ : 7–12–2012.**

ಈ ಅಧಿಸೂಚನೆಯ ಅನುಬಂಧದಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯು ನಿವೇಶನ/ಮನೆಗಳನ್ನು ಕಟ್ಟಲು ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು ಇವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ, 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು, ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಇವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಯಮ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರಿ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಪರಿಶಿಷ್ಟ**

**ಜಿಲ್ಲೆ : ಗುಲ್ಬರ್ಗಾ** **ತಾಲ್ಲೂಕು : ಗುಲ್ಬರ್ಗಾ** **ಹೋಬಳಿ : ಗುಲ್ಬರ್ಗಾ** **ಗ್ರಾಮ : ಕಾಳಗನೂರ, ಕುಸನೂರು**

**ಗ್ರಾಮ : ಕಾಳಗನೂರು**

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಜಮೀನಿನ ವಿಸ್ತೀರ್ಣ | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. | ಎ ಗುಂ. | ರೂ. ಪೈ |
| 1. | ಮಹಾದೇವಪ್ಪ ತಂ. ಅಂದಪ್ಪಾ ಕಾಳಗನೂರು | ಮಹಾದೇವಪ್ಪ ತಂ. ಅಂದಪ್ಪಾ | 92ರ ಭಾಗ | ಖುಷ್ಕಿ | 91 | 92ರ ಉಳಿದ ಭಾಗ | 93 | 89 | 8–24<br>0–04(ಖ) | 13–33 |
| 2. | ಶರಣಬಸಪ್ಪ ತಂ. ರೇವಪ್ಪ ಚಳಕೆ | ಶರಣಬಸಪ್ಪ ತಂ. ರೇವಪ್ಪ ಚಳಕೆ | 93/1 | ಖುಷ್ಕಿ | 93.98ರ ಉಳಿದ ಭಾಗ | ಕುಸನೂರ ಗಡಿ | 94, 98 | 92, 93 ರ ಉಳಿದ ಭಾಗ | 2–00 | 3–18 |
| 3. | ಕವಿತಾ ಗಂ. ಶಿಮಕುಮಾರ ಪವಾರ | ಮಲ್ಲಿಕಾರ್ಜುನ ತಂ. ನಿಂಗಪ್ಪ<br>ಮಂಜುನಾಥ ತಂ. ನಿಂಗಪ್ಪ<br>ಕವಿತಾ ಗಂ. ಶಿವಕುಮಾರ ಪವಾರ | 93/2 | ಖುಷ್ಕಿ | 93 98ರ ಉಳಿದ ಭಾಗ | ಕುಸನೂರ ಗಡಿ | 93ರ ಉಳಿದ ಭಾಗ | 92, 93ರ ಉಳಿದ ಭಾಗ | 3–06 | 5–01 |

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಜಮೀನಿನ ವಿಸ್ತೀರ್ಣ ಎ ಗುಂ. | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. | | |
| 4. | ಸಾಯಬಣ್ಣ ತಂ. ಭೀಮಶ್ಯಾ | ಸಾಯಬಣ್ಣ ತಂ. ಭೀಮಶ್ಯಾ ಸಹಾಯಕ ಕಾರ್ಯಪಾಲಕ ಅಭಿಯಂತರರು ಕ.ಗೃ.ಮಂ. | 93/3ರ ಭಾಗ | ಖುಷ್ಕಿ | 93,98ರ ಉಳಿದ ಭಾಗ | ಕುಸನೂರ ಗಡಿ | 93 ರ ಉಳಿದ ಭಾಗ | 92,93ರ ಉಳಿದ ಭಾಗ | 5–07<br>0–09 (ಖ) | 8–17 |
| 5. | ಶೋಭಾಬಾಯಿ ಗಂ. ಶ್ರೀರಾಮ ಪವಾರ | ಶೋಭಾಬಾಯಿ ಗಂ. ಶ್ರೀರಾಮ ಪವಾರ | 93/4 | ಖುಷ್ಕಿ | 98,93ರ ಉಳಿದ ಭಾಗ | 93, ಉಳಿದ ಭಾಗ ಕುಸಸೂರು ಗಡಿ | 94,98 | 93/5,93/6 | 4–00 | 6–36 |
| 6. | ರಾಜೇಶ್ವರಿಬಾಯಿ ಗಂ. ಶಾಮ ಪವಾರ | ರಾಜೇಶ್ವರಿಬಾಯಿ ಗಂ. ಶಾಮ ಪವಾರ | 93/5 | ಖುಷ್ಕಿ | 93/6 ರ ಉಳಿದ ಭಾಗ | 93/2 ಉಳಿದ ಭಾಗ | 93/4 | 93/3 | 3–06 | 5–01 |
| 7. | ಮಹಾದೇವಪ್ಪ ತಂ. ಹಣಮಂತರಾಯ ಮೇಕಾರಿ | ಮಹಾದೇವಪ್ಪ ತಂ. ಹಣಮಂತರಾಯ ಮೇಕಾರಿ | 93/6 | ಖುಷ್ಕಿ | 98,91 | 93/5 ರ ಉಳಿದ ಭಾಗ | 93/4 | 93/3 | 1–05<br>0–02 (ಖ) | 1–08 |
| **ಗ್ರಾಮ : ಕುಸನೂರು** | | | | | | | | | | |
| 1. | ಚನ್ನಮ್ಮ ಗಂ. ಕಲ್ಲಪ್ಪ ತಗ್ಗಿನಮನಿ | ಚನ್ನಮ್ಮ ಗಂ. ಕಲ್ಲಪ್ಪ ತಗ್ಗಿನಮನಿ | 110/7 | ಖುಷ್ಕಿ | 110 ರ ಉಳಿದ ಭಾಗ | 110 ರ ಉಳಿದ ಭಾಗ | 110 ರ ಉಳಿದ ಭಾಗ | 114 | 1–28<br>0–01 (ಖ) | 4–73 |
| 2. | ಸಿದ್ದಣ್ಣ ತಂ. ಅಣವೀರಪ್ಪಾ ತೆಗ್ಗಿನಮನಿ ರೇವಪ್ಪ ತಂ. ಅಣವೀರಪ್ಪಾ ತೆಗ್ಗಿನಮನಿ | ಸಿದ್ದಣ್ಣ ತಂ. ಅಣವೀರಪ್ಪಾ ತೆಗ್ಗಿನಮನಿ ರೇವಪ್ಪ ತಂ. ಅಣವೀರಪ್ಪಾ ತೆಗ್ಗಿನಮನಿ | 113/3 | ಖುಷ್ಕಿ | 111<br>112 | 114 | 113/2 | 112 | 19–00 | 14–63 |
| 3. | ನಾಗಮ್ಮ ಗಂ. ಮಲ್ಲೇಶಪ್ಪಾ | ನಾಗಮ್ಮ ಗಂ. ಮಲ್ಲೇಶಪ್ಪಾ | 114/2 | ಖುಷ್ಕಿ | 113 | 117/2 | 114/1 | 114/3 | 1–30 | 1–68 |
| 4. | ಶಿವಶರಣಪ್ಪಾ ತಂ. ಪೀರಪ್ಪಾ ಕರಗರ | ಶಿವಶರಣಪ್ಪಾ ತಂ. ಪೀರಪ್ಪಾ ಕರಗರ | 119/1 | ಖುಷ್ಕಿ | 119/2, 119/16,17,18 | 120 | 107 | 119/15 | 4–00 | 4–60 |
| 5. | ತೇಜು ತಂ. ಜೇಮ್ಲು<br>ಗಣಪತಿ ತಂ. ಜೇಮ್ಲು<br>ಪಾಂಡು ತಂ. ಜೇಮ್ಲು | ತೇಜು ತಂ. ಜೇಮ್ಲು<br>ಗಣಪತಿ ತಂ. ಜೇಮ್ಲು<br>ಪಾಂಡು ತಂ. ಜೇಮ್ಲು | 119/3 | ಖುಷ್ಕಿ | 119/12 | 120 | 119/15 | 119/12 | 1–10<br>0–04 (ಖ) | 1–44 |

| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಜಮೀನಿನ ವಿಸ್ತೀರ್ಣ ಎ ಗುಂ. | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. | | |
| 6. | ಗೋಪಿಕೃಷ್ಣಾ ತಂ. ಭೀಮಣ್ಣಾ | ಗೋಪಿಕೃಷ್ಣಾ ತಂ. ಭೀಮಣ್ಣಾ | 119/14 | ಬಾಗಾಯ್ತು (ಕೊಳವೆ ಬಾವಿ) | 116 | 119/9 | 119/6 | 122 | 1–13 | 1–52 |
| 7. | 1. ಶಿವಾಜಿ ತಂ. ತುಳಜಾರಾಮ<br>2. ಸುಶೇಲಾಬಾಯಿ ಗಂ. ಶಂಕರ | 1. ಶಿವಾಜಿ ತಂ. ತುಳಜಾರಾಮ<br>2. ಸುಶೇಲಾಬಾಯಿ ಗಂ. ಶಂಕರ | 119/15 | ಖುಷ್ಕಿ | 119/19 | 120 | 119/1 | 119/3 | 4–04<br>0–04 (ಖ) | 4–72 |

| ಘೋಷ್ವಾರೆ | | | | |
|---|---|---|---|---|
| ಗ್ರಾಮ | ಖುಷ್ಕಿ ಎ–ಗುಂ | ಬಾಗಾಯ್ತು ಎ–ಗುಂ | ಖರಾಬು ಎ–ಗುಂ | ಒಟ್ಟು ವಿಸ್ತೀರ್ಣ ಎಕರೆ ಗುಂಟೆ |
| ಕಾಳಗನೂರ | 27–08 | – | 0–15 | 27–23 |
| ಕುಸನೂರ | 31–32 | 1–13 | 0–09 | 33–14 |
| ಒಟ್ಟು | 59–00 | 1–13 | 0–24 | 60–37 |

**ಗೃಹ ಆಯುಕ್ತರು,**

P.D. 4 ಕರ್ನಾಟಕ ಗೃಹ ಮಂಡಳಿ, ಬೆಂಗಳೂರು–9

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

**ಅಧಿಸೂಚನೆ ಸಂಖ್ಯೆ:ಬಿ3:ಅಮೊ.ವಾಹನ.ಪ್ರಕಟಣೆ:ವಿವ:31/12–13, ದಿನಾಂಕ: 05–10–2012**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಟಿ.ವಿ.ಎಸ್.ಬೈಕ್<br>ಕೆಎ–14–ಎನ್‌ಟಿ–27425 | ಆನವಟ್ಟಿ ವಲಯದ<br>ಅ.ಮೊ. ಸಂಖ್ಯೆ :74/12–13 ದಿ:12–08–2012 | 082247 | L87607 |

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 2 | ಆಟೋ ರಿಕ್ಷಾ ಕೆಎ–15–3271 | ಸಾಗರ ವಲಯದ<br>ಅ.ಮೊ. ಸಂಖ್ಯೆ :59/12–13 ದಿ:26–08–2012 | Not Visible | Not Visible |
| 3 | ಹೀರೋ ಹೋಂಡಾ ಬೈಕ್<br>ಕೆಎ–27–ಇ–8677 | ಸಾಗರ ವಲಯದ<br>ಅ.ಮೊ. ಸಂಖ್ಯೆ :64/12–13 ದಿ:03–09–2012 | 96L10E09346 | Not Visible |
| 4 | ಟಾಟಾ 207–ಕೆಎ–15–7350 | ಆನಂದಪುರಂ ವಲಯ<br>ಅ.ಮೊ. ಸಂಖ್ಯೆ :59/12–13 ದಿ:05–09–2012 | 497SP38DYY621672 | MAT374466B9D14393 |
| 5 | ಟೆಂಪೋ ಟ್ರ್ಯಾಕ್ಸ್ ಕಾರ್ಗೋ<br>ಕೆಎ–15–3862 | ಹೊಸನಗರ ವಲಯದ<br>ಅ.ಮೊ. ಸಂಖ್ಯೆ :54/12–13 ದಿ:09–09–2012 | D27004940 | 57037246205 |
| 6 | ಟ್ರ್ಯಾಕ್ಟರ್ ಕೆಎ–15–7878<br>ಟ್ರೈಲರ್ ಕೆಎ–15–ಟಿ–2814 | ಶಿಕಾರಿಪುರ ವಲಯದ<br>ಅ.ಮೊ. ಸಂಖ್ಯೆ :55/12–13 ದಿ:19–09–2012 | Not Visible | Not Visible |
| 7 | ಮಾರುತಿ ವ್ಯಾನ್<br>ಕೆಎ–37–ಎಂ–3000 | ಸಾಗರ ವಲಯದ<br>ಅ.ಮೊ. ಸಂಖ್ಯೆ :78/12–13 ದಿ:30–09–2012 | Not Visible | Not Visible |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಆರ್.ರವಿಶಂಕರ್,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**P.R. 1604**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

### ಅಧಿಸೂಚನೆ ಸಂಖ್ಯೆ:ಬಿ3:ಅಮೊ.ವಾಹನ.ಪ್ರಕಟಣೆ:ವಿವ: 35/12–13, ದಿನಾಂಕ:05–12–2012

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಮಹೇಂದ್ರ ಪಿಕ್ ಅಪ್<br>ಕೆಎ–38–3952 | ಅಂಬ್ಲಿಗೊಳ ವಲಯದ<br>ಅ.ಮೊ. ಸಂಖ್ಯೆ :30/12–13 ದಿ:30–06–2012 | GA61B14663 | MAIZA24AA61B14686 |
| 2 | ಪೋರ್ಸ್ ಟ್ರಂಪ್ 40<br>ಕೆಎ–14–ಟಿಆರ್–2215 | ಆನಂದಪುರಂ ವಲಯದ<br>ಅ.ಮೊ. ಸಂಖ್ಯೆ :40/12–13 ದಿ:09–07–2012 | D44006412 | MCICIADA8BA006253 |
| 3 | ಟಾಟಾ 407<br>ಕೆಎ–21–4044 | ಆನಂದಪುರಂ ವಲಯದ<br>ಅ.ಮೊ. ಸಂಖ್ಯೆ :65/12–13 ದಿ:10–10–2012 | TAPE497SPQ2IM00788060 | 357011MQQ826825 |
| 4 | ಮಾರುತಿ ವ್ಯಾನ್<br>ಕೆಎ–14–ಪಿ–5005 | ಅಂಬ್ಲಿಗೊಳ ವಲಯ<br>ಅ.ಮೊ. ಸಂಖ್ಯೆ :52/12–13 ದಿ:13–10–2012 | 1869386 | ST91IN378475 |
| 5 | ಟಾಟಾ 407<br>ಕೆಎ–18–6470 | ಅಂಬ್ಲಿಗೊಳ ವಲಯ<br>ಅ.ಮೊ. ಸಂಖ್ಯೆ :52/12–13 ದಿ:13–10–2012 | RD733608 | TYRE4970SP21 |
| 6 | ಹಿರೋ ಹೋಂಡಾ ಸ್ಪ್ಲೆಂಡರ್ ಬೈಕ್<br>ಕೆಎ–17–ವೈ–480 | ಆನಂದಪುರಂ ವಲಯದ<br>ಅ.ಮೊ. ಸಂಖ್ಯೆ :06/12–13 ದಿ:15–05–2012 | Not visible | MBLHA10EE89E48055 |
| 7 | ಮಾರುತಿ ವ್ಯಾನ್<br>ಕೆಎ–20–ಪಿ–5427 | ಅಂಬ್ಲಿಗೊಳ ವಲಯದ<br>ಅ.ಮೊ. ಸಂಖ್ಯೆ :51/12–13 ದಿ:12–10–2012 | 536858 | 2112845 |
| 8 | ಟಾಟಾ 207 ಕೆಎ–15–7350 | ಆನಂದಪುರಂ ವಲಯದ<br>ಅ.ಮೊ. ಸಂಖ್ಯೆ :59/12–13 ದಿ:05–09–2012 | 4975P38DYY621672 | MAT374466B9D14393 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳಸಹಿದಾರರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಲು ಸೂಚಿಸಿದೆ. ಈ ಮೇಲಿನ ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ಇತರೆ ಮೂಲ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ತಿಳಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಆರ್.ರವಿಶಂಕರ್,**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**P.R. 1605**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:ಸಿಆರ್‌ಎಂ:59:2008-09ದಿ:30-10-2012**

**ಉಪಸ್ಥಿತರು:** ಹೆಚ್.ಎನ್.ಆನಂದ್,ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಕುಟ್ಟಠಾಣೆ, ವಿರಾಜಪೇಟೆ. | | 1. ನಾಗರಾಜು.ಹೆಚ್.ಆರ್ ತಂದೆ ಪೌತಿ ರಾಜು, ಕೋತೂರು,<br>2. ಕೆ.ಹೆಚ್.ರಘು, ಬಿನ್ ಕೆ.ಹರಿದಾಸ, ಜೀಪು ಚಾಲಕ, ನಾಥಂಗಾಲ, ಕುಟ್ಟ ಗ್ರಾಮ. |

**ಪ್ರಕರಣದ ಮುಖ್ಯಾಂಶಗಳು:-**

ದಿ:17-3-2009ರಂದು ಆರಕ್ಷಕ ಉಪ ನಿರೀಕ್ಷಕರು, ಕುಟ್ಟ ಪೋಲಿಸ್ ಠಾಣೆಯಲ್ಲಿರುವಾಗ ಸಮಯ ಸಂಜೆ 6.30 ಗಂಟೆಗೆ ಲಕ್ಕುಂದ ನಿವಾಸಿಯಾದ ನಾಗರಾಜು ಎಂಬುವರು ಬ್ರಾಂಡಿಯನ್ನು ಮಾರಾಟ ಮಾಡುವ ಸಲುವಾಗಿ ಜೀಪಿನಲ್ಲಿ ಸಾಗಿಸುತ್ತಿದ್ದಾರೆ ಎಂಬುದಾಗಿ ಸಿಕ್ಕಿದ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಯವರೊಂದಿಗೆ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಸುಮಾರು ಸಂಜೆ 6.40ರ ಸಮಯದಲ್ಲಿ ಹೊರಟು ಮೇಲ್ಕಂಡ ಸ್ಥಳಕ್ಕೆ ಬಂದು ಪಂಚಾಯತುದಾರರನ್ನು ಬರಮಾಡಿಕೊಂಡು ಅವರಿಗೆ ಈ ಮೇಲ್ಕಂಡ ವಿಚಾರದ ಮಾಹಿತಿಯನ್ನು ತಿಳಿಸಿ ಇಲಾಖಾ ಜೀಪಿನಲ್ಲಿ ಕೂರಿಸಿಕೊಂಡು ಲಕ್ಕುಂದ ಜಂಕ್ಷನ್ ರಸ್ತೆಯ ಪಕ್ಕದಲ್ಲಿ ಜೀಪನ್ನು ನಿಲ್ಲಿಸಿ ಕಾಯುತ್ತಿರುವಾಗ್ಗೆ, ಕುಟ್ಟ ಕಡೆಯಿಂದ ಲಕ್ಕುಂದ ಕಡೆಗೆ ಒಂದು ಜೀಪು ಬರುತ್ತಿದ್ದು ಸಮಯ ಸಂಜೆ 7.30 ರ ಸಮಯದಲ್ಲಿ ಜೀಪನ್ನು ಪೋಲಿಸ್ ಇಲಾಖೆಯವರು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಜೀಪಿನಲ್ಲಿ ಚಾಲಕ ಹಾಗೂ ಚಾಲಕನ ಪಕ್ಕದಲ್ಲಿ ಒಬ್ಬ ವ್ಯಕ್ತಿಯು ಕುಳಿತಿದ್ದು, ಪಂಚಾಯತುದಾರರ ಸಮಕ್ಷಮ ಜೀಪನ್ನು ಪರಿಶೀಲಿಸಲಾಗಿ ಜೀಪಿನ ಹಿಂಭಾಗದಲ್ಲಿ ಒಂದು ಕಾರ್ಡ್ ಬೋರ್ಡ್ ಪೆಟ್ಟಿಗೆ ಇದ್ದು, ಜೀಪಿನಲ್ಲಿ ಚಾಲಕ ಹಾಗೂ ಚಾಲಕನ ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿಯನ್ನು ಸದರಿ ಕಾರ್ಡ್ ಬೋರ್ಡ್ ಬಾಕ್ಸ್ ನಲ್ಲಿ ಏನೆಂದು ಕೇಳಿದಾಗ ಕ್ವಾಟರ್ ಬ್ರಾಂಡಿ ಬಾಟಲ್ ಎಂಬುದಾಗಿಯು ಇದನ್ನು ಕೇಂಬುಕೊಲ್ಲಿ ಬಾರ್ ನಿಂದ ತಲಾ 180 ಮಿಲಿಯ ಕ್ವಾಟರ್ ಬಾಟಲಿಗೆ 45/- ರೂ. ನಂತೆ ಒಟ್ಟು 2,160/- ಗಳನ್ನು ಕೊಟ್ಟು ಕ್ರಯಕ್ಕೆ ತೆಗೆದುಕೊಂಡು ಜೀಪಿನಲ್ಲಿ ಲಕ್ಕುಂದಕ್ಕೆ ತಂದು ಮಾರಾಟ ಮಾಡಲು ಸಾಗಿರುತ್ತಿರುವುದಾಗಿಯೂ ತಿಳಿಸಿದರು. ಚಾಲಕನ ಹೆಸರು, ವಿಳಾಸ ಕೇಳಲಾಗಿ, ಕೆ.ಹೆಚ್.ರಘು, ಬಿನ್ ಕೆ.ಹರಿದಾಸ, 26 ವರ್ಷ ಪ್ರಾಯ, ಜೀಪು ಚಾಲಕ, ನಾಥಂಗಾಲ, ಕುಟ್ಟ ಗ್ರಾಮದ ನಿವಾಸಿ ಎಂಬುದಾಗಿ ತಿಳಿಸಿದನು. ಚಾಲಕನ ಪಕ್ಕದಲ್ಲಿ ಕುಳಿತವನ ಹೆಸರು ವಿಳಾಸ ಕೇಳಲಾಗಿ ಹೆಚ್. ಅರ್ ನಾಗರಾಜು, ಬಿನ್ ರಾಜು, ಕೂಲಿ ಕೆಲಸ, ಲಕ್ಕುಂದ ಪೈಸಾರಿ ನಿವಾಸಿ, ಕೋತೂರು ಗ್ರಾಮ ನಿವಾಸಿ ಎಂಬುದಾಗಿ ತಿಳಿಸಿರುತ್ತಾರೆ. ನಾಗರಾಜು ಎಂಬುವವರು ರಘು ಚಲಿಸುತ್ತಿದ್ದ ಜೀಪನ್ನು ಬಾಡಿಗೆಗೆ ಕರೆದುಕೊಂಡು ಮೇಲ್ಕಂಡ ಬ್ರಾಂಡಿ ಇರುವ ಬಾಕ್ಸ್ ಯನ್ನು ಜೀಪಿನಲ್ಲಿ ತೆಗೆದುಕೊಂಡು ಹೋಗುವುದಾಗಿಯೂ ಕ್ವಾಟರ್ ಬಾಟಲ್ ಒಂದಕ್ಕೆ ರೂ.50/- ರಂತೆ ಜನರಿಗೆ ಮಾರಾಟ ಮಾಡುವುದಾಗಿಯೂ ತಿಳಿಸಿರುತ್ತಾರೆ. ಸದರಿ ಬಾಕ್ಸ್‌ಯನ್ನು ಪಂಚಾಯತುದಾರರ ಸಮಕ್ಷಮ ಅಜಮಾಯಿಸಲಾಗಿ ಕಾರ್ಡ್ ಬೋರ್ಡ್ ಬಾಕ್ಸ್ ಯಾಗಿದ್ದು, ಅವುಗಳ ಒಂದು ಬದಿಯಲ್ಲಿ ಇಂಗ್ಲೀಷ್‌ನಲ್ಲಿ John Distilleries Ltd., ಇನ್ನೊಂದು ಬದಿಯಲ್ಲಿ John Original Choice Deluxe Whisky, John Distilleries Ltd ಎಂದು ಬರೆದಿರುತ್ತದೆ. ಬಾಕ್ಸ್ ಯನ್ನು ತೆರೆದು ನೋಡಲಾಗಿ ಬಾಕ್ಸಿನ ಒಳಗೆ 48*180 ಮಿಲಿಯ ಮದ್ಯ ತುಂಬಿದ ಕ್ವಾಟರ್ ಬಾಟಲಿಗಳಿದ್ದು, ಬಾಟಲಿಗಳ ಮೇಲೆ John Original Choice Deluxe Whisky, 180 ಮಿಲಿ ಎಂ.ಆರ್.ಪಿ. ರೂ.38.47 ಎಂಬುದಾಗಿ ಪ್ರತಿ ಕ್ವಾಟರ್ ಬಾಟಲಿಗಳ ಮೇಲೆ ನಮೂದಿಸಿರುತ್ತಾರೆ. 48*180 ಮಿಲಿಯ ಕ್ವಾಟರ್ ಬಾಟಲಿಯ ಪೈಕಿ 1 ಬಾಟಲಿಯನ್ನು ಮಾದರಿಗಾಗಿ ತೆಗೆದು ಅದರ ಬಾಯಿಗೆ ಬಿಳಿ ಬಟ್ಟೆಯಿಂದ ಸುತ್ತಿ, 'ಕೆ' ಎಂಬ ಅಕ್ಷರದಿಂದ ಸೀಲು ಮಾಡಿ ಪಂಜಯತುದಾರರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. ಇದಕ್ಕೆ ಕ್ರಮ ಸಂ.1 ಎಂದು ಉಳಿದ ಕ್ವಾಟರ್ ಬಾಟಲಿ ಇರುವ ಕಾರ್ಡ್ ಬೋರ್ಡ್ ಬಾಕ್ಸ್‌ಗೆ ಕ್ರ.ಸಂ. 2 ಎಂದು ನಮೂದಿಸಿ, ಪಂಚಾಯತುದಾರರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. ಇದರ ಓಟ್ಟು ಮೌಲ್ಯ ರೂ. 2,160/- ಯಾಗಬಹುದೆಂದು ಪಂಚಾಯತುದಾರರು ಅಭಿಪ್ರಾಯ ಪಟ್ಟಿರುತ್ತಾರೆ.

ಜೀಪನ್ನು ಪಂಚಾಯತುದಾರರ ಸಮಕ್ಷಮ ಅಜಮಾಯಿಸಲಾಗಿ ಮಹೇಂದ್ರ ಕಂಪೆನಿಗೆ ಸೇರಿದ ಜೀಪಾಗಿದ್ದು, ಸಾದಾರಣ ಬೂದು ಬಣ್ಣದ ಅಂದರೆ ಸೀಮೆಂಟ್ ಕಲರಿನಿಂದ ಕೂಡಿದ್ದು, ಇದರ ಮಂಭಾಗದ ಗ್ಲಾಸಿನ ಮೇಲೆ ಇಂಗೀಷ್ ಅಕ್ಷರದಲ್ಲಿ ಶ್ರೀಮೂಕಾಂಬಿಕ ಎಂದು ಬರೆದಿರುತ್ತದೆ. ಮುಂಬಾಗದ ಬಂಪರಿನ ಮೇಲೆ ಹಾಗೂ ಹಿಂಭಾಗದಲ್ಲಿ ಬಿಳಿಬಣ್ಣದ ನಂಬರ್ ಪ್ಲೇಟಿನ ಮೇಲೆ ಕೆಎ-15-ಎಂ-594 ಎಂಬುದಾಗಿ ಜೀಪಿನ ನಂಬರನ್ನು ನಮೂದಿಸಿ ಅಳವಡಿಸಿರುತ್ತೆ. ಜೀಪಿನ ಮೇಲೆ ಕ್ಯಾರಿಯರ್‌ಯನ್ನು ಅಳವಡಿಸಿರುತ್ತದೆ. ಸದರಿ ಜೀಪನ್ನು ಪಂಚಾಯತುದಾರರ ಸಮಕ್ಷಮ ವಶಕ್ಕೆ ತೆಗೆದುಕೊಳ್ಳಲಾಯಿತು. ಸದರಿ ಮೇಲ್ಕಂಡ ಅರೋಪಿಗಳು ಸರ್ಕಾರದ ರಹದಾರಿ ಇಲ್ಲದೇ ಮದ್ಯದ ಬಾಟಲಿಗಳನ್ನು ಮಾರಾಟ ಮಾಡಲು ಜೀಪಿನಲ್ಲಿ ಸಾಗಿಸುತ್ತಿದ್ದದ್ದು ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಅಪರಾಧವಾಗಿರುವುದರಿಂದ ಸದರಿ ಮೇಲ್ಕಂಡ ಅರೋಪಿಗಳನ್ನು ದಸ್ತಗಿರಿ ಮಾಡಿ ಪೋಲಿಸ್ ಇಲಾಖಾ ವಶಕ್ಕೆ ತೆಗೆದುಕೊಂಡು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11 R/w 32, 34 ರ ಪ್ರಕಾರ ಅಪರಾಧವಾದ್ದರಿಂದ ಆರಕ್ಷಕ ಉಪ ನಿರೀಕ್ಷಕರು, ಕುಟ್ಟ ಪೋಲಿಸ್ ಠಾಣೆ ಇವರು ಮೊಕದ್ದಮೆ ಸಂ:16/2009, ದಿ:17-3-2009ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮತಿಯನ್ನು ಪಡೆದು ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ವಲಯ ಇವರಿಗೆ ವಾಹನ ಮತ್ತು ಸ್ವೊತ್ತನ್ನು ಮುಂದಿನ ಕ್ರಮಕ್ಕಾಗಿ ಹಸ್ತಾಂತರಿಸಿರುತ್ತಾರೆ.

ದಿ:24-3-2009ರಂದು ವಾಹನದ ಮಾಲೀಕರ ಪರ ವಕೀಲರು ವಾಕಲತ್ತು ಅರ್ಜಿಯನ್ನು ಮತ್ತು ವಾಹನದ ದಾಖಲಾತಿಗಳಾದ ಅರ್.ಸಿ.ಪುಸ್ತಕದ ಹಾಗೂ ಇನ್‌ಶೂರೆನ್ಸ್ ಪ್ರತಿಯ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸಿ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಮದ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ.

ಈ ಸಂಬಂಧವಾಗಿ ಪ್ರಕರಣ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು ತನಿಖೆಯನ್ನು ಪ್ರಾರಂಬಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಂದ ಸದರಿ ವಾಹನದ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಪಡೆದು ವರದಿಯೊಂದಿಗೆ ದಿ:23-4-2009ರಂದು ಸಲ್ಲಿಸಿರುತ್ತಾರೆ. ಸದರಿ 'ಬಿ' ಎಕ್ಸ್‌ಟ್ರಾಕ್ಟ್‌ನಲ್ಲಿದ್ದಂತೆ ಶ್ರೀ. ಕೆ.ಹರಿದಾಸ್, ಬಿನ್ ಕುಂಞ್ಞಿ, ಕುಟ್ಟ ಗ್ರಾಮ ಮತ್ತು ಅಂಚೆ, ವಿರಾಜಪೇಟೆ ತಾಲ್ಲೂಕು ಇವರಿಗೆ ದಿ:18-6-2009 ರಲ್ಲಿ ಅಬಕಾರಿ ಕಾಯ್ದೆ ಕಲಂ 43ಬಿರ ರೀತ್ಯಾ ಕಾರಣ ಕೇಳಿ ನೋಟಿಸ್‌ನ್ನು ನೋಂದಣಿ ಅಂಚೆಯ ಮೂಲಕ ನೀಡಲಾಗಿರುತ್ತದೆ. ಸದರಿ ನೋಟಿಸಿಗೆ ಸಂಬಂಧವಾಗಿ ವಾಹನದ ಮಾಲೀಕರ ಪರ ವಕೀಲರು ದಿ:7-9-2009ರಂದು ಮನವಿ ಸಲ್ಲಿಸಿ ಮದ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ. ಅವರ ಕೋರಿಕೆಯ ಹಿನ್ನೆಲೆಯಲ್ಲಿ

ದಿ:17–9–2009ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು. ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ಪತ್ರ ಬರೆದು ಸದರಿ ವಾಹನಕ್ಕೆ ಬೆಲೆ ನಿಗಧಿಪಡಿಸಲು ಕೋರಲಾಗಿತ್ತು. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಚೇರಿಯ ಹಿರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರಿಶೀಲಿಸಿ ವಾಹನವು 1996 ರ ತಯಾರಿಕೆಯಾಗಿದ್ದು, ಅದರ ಸ್ಥಿತಿಗತಿಗಳನ್ನು ಗಮನಿಸಿ, ರೂ.22,000/– (ಇಪ್ಪತ್ತೆರಡು ಸಾವಿರ)ಗಳ ಬೆಲೆ ನಿಗಧಿಪಡಿಸಿ ದಿ:15–10–2009ರಂದು ಈ ಕಛೇರಿಗೆ ಸಲ್ಲಿಸಿರುತ್ತಾರೆ. ದಿ:31–10–2009ರಂದು ವಾಹನದ ಮಾಲೀಕರಿಗೆ ನೋಟೀಸ್ ನೀಡಿ ಸದರಿ ಮೌಲ್ಯಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿಯನ್ನು ಮತ್ತು ಷರತ್ತುಗಳಿಗೆ ಬದ್ಧರಾದಲ್ಲಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಮಧ್ಯಂತರ ಬಿಡುಗಡೆ ಗೊಳಿಸುವುದಾಗಿ ತಿಳಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ವಾಹನದ ಮಾಲೀಕರು ರೂ.22,000/( ಇಪ್ಪತ್ತೆರಡು ಸಾವಿರ) ಬ್ಯಾಂಕ್ ಗ್ಯಾರೆಂಟಿಯನ್ನು ಕೆನರಾ ಬ್ಯಾಂಕ್, ಕುಟ್ಟ ಶಾಖೆ, ಇವರಿಂದ ಪಡೆದು ಸಲ್ಲಿಸಿ ಇಲಾಖಾ ಷರತ್ತುಗಳಿಗೆ ಒಪ್ಪಿಕೊಂಡಿರುವ ಹಿನ್ನೆಲೆಯಲ್ಲಿ ದಿ:13–11–2009ರಂದು ವಾಹನ ಮಹೇಂದ್ರ ಜೀಪು ಸಂ: ಕೆಎ–15–ಎಂ–594ರನ್ನು ಮಧ್ಯಂತರ ಬಿಡುಗಡೆ ಮಾಡಲಾಗಿರುತ್ತದೆ. ತದನಂತರ ರೂ.22,000/ (ಇಪ್ಪತ್ತೆರಡು ಸಾವಿರ) ಬ್ಯಾಂಕ್ ಗ್ಯಾರೆಂಟಿಯನ್ನು ಇನ್ವೋಕ್ ಮಾಡಿ ರೆವಿನ್ಯೂ ಖಾತೆಯಲ್ಲಿಡಲಾಗಿದೆ.

ಸದರಿ ಪ್ರಕರಣದ ವಿಚಾರಣೆ ಸಂಬಂಧವಾಗಿ ದಿನಾಂಕ ನಿಗಧಿ ಪಡಿಸಿ ದಿ:26–8–11, 19–9–11, 21–11–11, 28–11–11, 26–12–11, 30–10–12 ರಂದು ವಿಚಾರಣೆ ಕರೆಯಲಾಗಿರುತ್ತದೆ. ಕೆಲವು ದಿನಾಂಕಗಳಲ್ಲಿ ಅಂದರೆ ದಿ: 12–7–11, 26–8–11, 19–9–11, 12–12–11, 16–12–11, 26–12–12 ಗಳಂದು ವಾಹನದ ಮಾಲೀಕರು ಹಾಜರಾಗಿರುವುದಿಲ್ಲ ಮತ್ತು ಕೆಲವು ದಿನಾಂಕಗಳಲ್ಲಿ ವಾಹನವನ್ನು ಹಾಜರು ಪಡಿಸಿರುವುದಿಲ್ಲವಾದ ಕಾರಣ ಅಂತಿಮ ಅವಕಾಶ ನೀಡಿ ದಿ:30–10–12ಕ್ಕೆ ನಿಗಧಿಪಡಿಸಿ ನೋಟೀಸ್ ನೀಡಲಾಗಿತ್ತು. ಸದರಿ ದಿನಾಂಕದಂದು ವಾಹನದೊಂದಿಗೆ ವಾಹನದ ಮಾಲೀಕರು ಹಾಜರಾಗಿರುತ್ತಾರೆ. ಸದರಿಯವರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿ ತಾನು ಆರ್ಥಿಕವಾಗಿ ತೊಂದರೆ ಅನುಭವಿಸುತ್ತಿದ್ದು, ಪ್ರತಿ ಬಾರಿಯೂ ನ್ಯಾಯಾಲಯಕ್ಕೆ ಹಾಜರಾಗಲು ತನ್ನಿಂದ ಸಾಧ್ಯವಾಗುವುದಿಲ್ಲ.ವಕೀಲರನ್ನು ಪ್ರತಿ ಸಾರಿಯು ಕರೆತರಲು ಹಣಕಾಸಿನ ತೊಂದರೆ ಇದೆ ಎಂದು, ಆದುದರಿಂದ ತಾನು ಈಗಾಗಲೆ ವಾಹನದ ಮೌಲ್ಯಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿಯನ್ನು ನೀಡಿರುವ ಹಣವನ್ನು ಸರಕಾರಕ್ಕೆ ಜಮಾ ಮಾಡಿ ಕೊಂಡು ಪ್ರಕರಣ ಮುಕ್ತಾಯ ಮಾಡಿಕೊಡಬೇಕಾಗಿ ಕೋರಿರುತ್ತಾರೆ. ಈ ಸಂಬಂಧ ಹಾಜರಿದ್ದ ಸದರಿ ಪ್ರಕರಣದ ತನಿಖಾಧಿಕಾರಿಗಳು ಮತ್ತು ಪ್ರಕರಣ ದಾಖಲು ಮಾಡಿದ ಅಧಿಕಾರಿಗಳು ವಾಹನದ ಮಾಲಿಕರ ಕೋರಿಕೆಯನ್ನು ಪರಿಗಣಿಸಲು ಒಪ್ಪಿಗೆ ನೀಡಿರುತ್ತಾರೆ ಹಾಗು ಅವರುಗಳ ಅಭಿಪ್ರಾಯದಂತೆ ಸರಕಾರದ ಆದಾಯದ ಹಿತದೃಷ್ಟಿಯಿಂದ, ಸದರಿ ವಾಹನದ ಇಂದಿನ ಸ್ಥಿತಿಗತಿಯನ್ನು ಪರಿಶೀಲಿಸಿ,ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜುಮಾಡಿದಲ್ಲಿ ವಾಹನದ ಮಾಲಿಕರು ನೀಡಿರುವ ಭದ್ರತಾ ಮೊತ್ತಕ್ಕಿಂತಲು ಕಡಿಮೆ ಬೆಲೆ ದೊರೆಯುವ ಸಾಧ್ಯತೆ ಇದ್ದು ಸರಕಾರಕ್ಕೆ ನಷ್ಟ ಆಗುವ ಸಾಧ್ಯತೆ ಇರುತ್ತದೆ. ವಾಹನದ ಮಾಲೀಕರೇ ಪ್ರಕರಣ ನಡೆಸಲು ಉತ್ಸುಕರಿಲ್ಲದ ಹಿನ್ನೆಲೆಯಲ್ಲಿ ಮಾಲೀಕರ ಕೋರಿಕೆಯನ್ನು ಪರಿಗಣಿಸಿ ಪ್ರಕರಣವನ್ನು ಮುಕ್ತಾಯಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್ ಇ:ಸಿಆರ್ಎಂ:59:2008–09, ದಿ:30–10–2012**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಮೇಲೆ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43 "ಬಿ" ರಡಿಯಲ್ಲಿ ಅನುಸರಿಸ ಬೇಕಾದ ಕ್ರಮಗಳನ್ನು ಅನುಸರಿಸಿ, ವಾಹನದ ಮಾಲೀಕರು ಪ್ರಕರಣವನ್ನು ನಡೆಸಲು ಸಾಧ್ಯವಿಲ್ಲವೆಂದು ತಿಳಿಸಿರುವ ಹಿನ್ನಲೆಯಲ್ಲಿ ಆರಕ್ಷಕ ನಿರೀಕ್ಷಕರು, ಕುಟ್ಟ ಠಾಣೆ, ರವರ ಕ್ರೈಂ ಸಂ:16/2009, ದಿ:17–3–2009ರಂತೆ ಅಕ್ರಮ ಮದ್ಯ ಸಾಗಾಣಿಕೆ ಸಂಬಂಧ ಜಪ್ತುಪಡಿಸಿದ ವಾಹನ ಮಹೇಂದ್ರ ಜೀಪ್ ಸಂ: ಕೆಎ–15–ಎಂ–594ರನ್ನು ಮದ್ಯಂತರ ಬಿಡುಗಡೆ ಪಡೆಯುವ ಸಂಬಂಧ ನೀಡಿರುವ ವಾಹನದ ಮೌಲ್ಯಕ್ಕೆ ಸಮನಾದ ಬ್ಯಾಂಕ್ಗ್ಯಾರೆಂಟಿ ಮೊತ್ತ ರೂ.22,000/ (ಇಪ್ಪತ್ತೆರಡು ಸಾವಿರ) (ರೆವಿನ್ಯೂ ಖಾತೆಯಲ್ಲಿಡಲಾದ ಮೊತ್ತ)ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಶೀರ್ಷಿಕೆಗೆ ವರ್ಗಾವಣೆ ಮೂಲಕ ಜಮಾ ಮಾಡಲು ಹಾಗೂ ಪ್ರಕರಣವನ್ನು ಮುಕ್ತಾಯಗೊಳಿಸಲು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿ:30–10–12ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಸ್,ಕೊಡಗು ಜಿಲ್ಲೆ, ಮಡಿಕೇರಿ.

PR.1465

## ಕಾರ್ಮಿಕ ಸಚಿವಾಲಯ

**ಸಂಖ್ಯೆ: ಕಾಇ 164 ಎಲ್‌ಡಬ್ಲ್ಯೂಎ 2012 ಬೆಂಗಳೂರು, ದಿನಾಂಕ: 17–11–2012.**

**ತಿದ್ದುಪಡಿ**

ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ವಾಹನ ಚಾಲಕರ ಅಪಘಾತ ಪರಿಹಾರ ಯೋಜನೆಗೆ ಅರ್ಹ ಫಲಾನುಭವಿಗಳನ್ನು ನೋಂದಣಿ ಮಾಡಿಕೊಳ್ಳಲು ಕಾರ್ಮಿಕ ಅಧಿಕಾರಿಗಳನ್ನು ನೋಂದಣಿ ಅಧಿಕಾರಿಗಳನ್ನಾಗಿ ನೇಮಿಸಲಾಗಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 40 ಎಲ್‌ಡಬ್ಲ್ಯೂಎ 2011, ದಿನಾಂಕ: 12–01–2012 ರ ಅನುಬಂಧದ ಕಲಂ 1 ರಲ್ಲಿನ ಈ ಕೆಳಗಿನ ಕ್ರಮ ಸಂಖ್ಯೆಗಳ ಮುಂದೆ ಕಲಂ 3 ರಲ್ಲಿನ ಕಾರ್ಯವ್ಯಾಪ್ತಿಯನ್ನು ಕೆಳಕಂಡ ತಿದ್ದುಪಡಿಗಳೊಂದಿಗೆ ಓದಿಕೊಳ್ಳತಕ್ಕದ್ದು.

| ಕ್ರ.ಸಂ. | ಕಾರ್ಯವ್ಯಾಪ್ತಿ |
|---|---|
| 1 | ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾ: |
| 2 | ಬೆಂಗಳೂರು ನಗರ ಜಿಲ್ಲೆ. |
| 3 | ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾ: |

| | |
|---|---|
| 4 | ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾ: |
| 5 | ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾ: |
| 6 | ಬೆಂಗಳೂರು ನಗರ ಜಿಲ್ಲೆ ಮತ್ತು ಆನೇಕಲ್ ತಾ: |
| 9 | ಮಂಡ್ಯ ಜಿಲ್ಲೆ. |
| 10 | ಮಂಡ್ಯ ಜಿಲ್ಲೆ. |
| 14 | ಬಳ್ಳಾರಿ ಜಿಲ್ಲೆ. |
| 15 | ಬಳ್ಳಾರಿ ಜಿಲ್ಲೆ. |
| 21 | ಬೆಳಗಾವಿ ಜಿಲ್ಲೆ |
| 22 | ಬೆಳಗಾವಿ ಜಿಲ್ಲೆ |
| 23 | ಬಿಜಾಪುರ ಜಿಲ್ಲೆ |
| 24 | ಬಿಜಾಪುರ ಜಿಲ್ಲೆ |
| 25 | ಧಾರವಾಡ ಜಿಲ್ಲೆ |
| 26 | ಧಾರವಾಡ ಜಿಲ್ಲೆ |
| 35 | ಚಿಕ್ಕಮಗಳೂರು ಜಿಲ್ಲೆ |
| 36 | ಚಿಕ್ಕಮಗಳೂರು ಜಿಲ್ಲೆ |
| 37 | ದಕ್ಷಿಣ ಕನ್ನಡ ಜಿಲ್ಲೆ |
| 38 | ದಕ್ಷಿಣ ಕನ್ನಡ ಜಿಲ್ಲೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

PR.1606

## POLICE INSPECTOR BANASHAKARI POLICE STATION BANGALORE CITY

**ಸುತ್ತೋಲೆ**

ಈ ಮೂಲಕ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಯ ಠಾಣಾಧಿಕಾರಿಗಳಲ್ಲಿ ಮನವಿ ಮಾಡಿಕೊಳ್ಳುವುದೇನೆಂದರೆ, ಬನಶಂಕರಿ ಪೊಲೀಸ್ ಠಾಣಾ ಸರಹದ್ದಿನಲ್ಲಿ ಪತ್ತೆಯಾಗದೇ ಇರುವ ಮತ್ತು ಆರೋಪಿಗಳ ವರ್ತಮಾನದಿಂದ ಸ್ವಾಧೀನಪಡಿಸಿಕೊಂಡಿರುವ ದ್ವಿ ಚಕ್ರ, ತ್ರಿಚಕ್ರ ಮತ್ತು ನಾಲ್ಕು ಚಕ್ರ ವಾಹನಗಳ ವಾರಸುದಾರರು ಪತ್ತೆಯಾಗದ ಕಾರಣ ತಮ್ಮ ಪೊಲೀಸ್ ಠಾಣೆಗಳಲ್ಲಿ ಈ ವಾಹನಗಳ ಬಗ್ಗೆ ಪ್ರಕರಣಗಳು ದಾಖಲಾಗಿದ್ದಲ್ಲಿ ಮಾಹಿತಿ ನೀಡಲು ಕೋರಿದೆ.

**ವಾಹನಗಳ ವಿವರ ಈ ಕೆಳಕಂಡಂತೆ ಇರುತ್ತದೆ.**

| Sl No | C-Misc No | PF | Make | Vehicle Reg No |
|---|---|---|---|---|
| 1 | 02/2009 | 18/2009 | Bajaj Scooter | CAI-2214 |
| 2 | 03/2009 | 19/2009 | Hero Honda Splendor | KA-21 E-8522 |
| 3 | 06/2009 | 22/2009 | Suzuki Samurai | KA-01 Q-4533 |
| 4 | 07/2009 | 23/2009 | Yamaha | KL-14 7739 |
| 5 | 08/2009 | 24/2009 | Bajaj CT-100 | TN-10K6135 |
| 6 | 09/2009 | 25/2009 | TVS XL | KA-03 U-7036 |
| 7 | 10/2009 | 26/2009 | Bajaj Scooter | KA-32 H-133 |
| 8 | 11/2009 | 27/2009 | Kinetic Honda | KA-01 L-1539 |
| 9 | 12/2009 | 28/2009 | Bajaj Scooter | CAV-4877 |
| 10 | 13/2009 | 29/2009 | TVS Fiero | KA-03 EC-9973 |
| 11 | 14/2009 | 30/2009 | Suzuki Shogan | KA-05 Q-4473 |
| 12 | 16/2009 | 32/2009 | Bajaj Scooter | KA-05 W-2657 |
| 13 | 17/2009 | 33/2009 | Kinetic Honda | KA-05 V-2517 |

| Sl No | C-Misc No | PF | Make | Vehicle Reg No |
|---|---|---|---|---|
| 14 | 18/2009 | 34/2009 | Kawasaki Bajaj | MH-20 G-4042 |
| 15 | 19/2009 | 35/2009 | Bajaj 120 | KA-03 E-6662 |
| 16 | 20/2009 | 36/2009 | Yamaha | GDN-3021 |
| 17 | 21/2009 | 37/2009 | Bajaj Pulsor | KA-04 EH-3125 |
| 18 | 22/2009 | 38/2009 | TVS XL | KA-03 EC-1689 |
| 19 | 23/2009 | 39/2009 | Hero Honda Passion | KL-07 AE-8160 |
| 20 | 24/2009 | 40/2009 | Bajaj Scooter | CKW-3776 |
| 21 | 25/2009 | 41/2009 | LML | KA-05 EJ9986 |
| 22 | 26/2009 | 42/2009 | Hero Honda | TN-27 W-7125 |
| 23 | 27/2009 | 43/2009 | Honda Dio | KA-04 V-669 |
| 24 | 28/2009 | 44/2009 | Yamaha | KA-02 V-2970 |
| 25 | 29/2009 | 45/2009 | Yamaha | KL-10 V-439 |
| 26 | 30/2009 | 46/2009 | Bajaj Pulsor | KA-05 EV-954 |
| 27 | 31/2009 | 47/2009 | Yamaha | KA-02 EE-4268 |
| 28 | 32/2009 | 48/2009 | TVS XL | KA-05 EX-6891 |
| 29 | 33/2009 | 49/2009 | Suzuki Samurai | KA-05 EA-1090 |
| 30 | 34/2009 | 50/2009 | Suzuki Samurai | Engine No-01803M045210 Chassis No-U1803F998116 |
| 31 | 37/2009 | 53/2009 | Suzuki Samurai | KA-05 HF-168 |
| 32 | 38/2009 | 54/2009 | Suzuki Samurai | KA-05 H-2254 |
| 33 | 22/2007 | 84/2007 | Scooter | KA-05 V-8761 |
| 34 | 24/2007 | 88/2007 | Saffair12 | KA-05 EF-3767 |
| 35 | 25/2007 | 89/2007 | Hero Puch | KA-04 H1589 |
| 36 | 26/2007 | 90/2007 | Scooter | KA-03 H-9316 |
| 37 | 218/09 U/S 379 IPC | 114/2009 | Bajaj pulsor | KA-03HE-777 |
| 38 | 218/09 U/S 379 IPC | 114/2009 | Bajaj caliber | KA-02-Y-5357 |
| 39 | 218/09 U/S 379 IPC | 114/2009 | RX-Yamaha | KA-05-Q-6787 |
| 40 | 251/09 U/S 379 IPC | 128/2009 | RX-Yamaha | KA-04-X-2972 |
| 41 | 251/09 U/S 379 IPC | 128/2009 | Hero Honda splendor | KA-05-EE-8823 |
| 42 | 44/09 U/S 379 IPC | 11/2009 | RX-135 Yamaha | KA-05-EK-7755 |
| 43 | 44/09 U/S 379 IPC | 12/2009 | MAX-100 | KA-13-ET-5849 |
| 44 | 44/09 U/S 379 IPC | 15/2009 | Bajaj Pulsor | KA-04-EF-4478 |
| 45 | 62/09 U/S 102 crpc | 56/2009 | TVS Heavy Duty | KA-05-Y-6718 |
| 46 | 62/09 U/S 102 crpc | 57/2009 | TVS Heavy Duty | KA-02-EA-8300 |
| 47 | 259/09 U/S 379 IPC | 27/2011 | Hero Honda Splendor | Engine No-00J20C2622 Chassis No-00J18M02879 |
| 48 | 259/09 U/S 379 IPC | 34/2011 | Hero Honda Splendor | KA-05 EH-6476 |
| 49 | 259/09 U/S 379 IPC | 37/2011 | Hero Honda Splendor | Engine No-23917 Chassis No-0220C01425 |
| 50 | 275/2010 U/s 379 IPC | 01/2011 | Bajaj Pulsor | KA-04 EP-7013 |
| 51 | 275/2010 U/s 379 IPC | 03/2011 | TVS Apachi | TN-24 V-3091 |
| 52 | 242/2010 U/s 379 IPC | 60/2010 | Maruthi Omni | KA-06 M -1576 |
| 53 | 218/2010 U/s 379 IPC | 74/2010 | Passenger Auto | -NIL- |
| 54 | 218/2010 U/s 379 IPC | 75/2010 | Passenger Auto | KA-05 C-1784 |
| 55 | 218/2010 U/s 379 IPC | 75/2010 | Passenger Auto | KA-05 C-2673 |

**POLICE INSPECTOR BANASHAKARI POLICE STATION**
**BANGALORE CITY**

**PR.1573**

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಬೆಂಗಳೂರು**

**ಅಧಿಸೂಚನೆ ಸಂ:ಕೃಮಾಇ/285/ನಿಯವಿ/2010 ದಿನಾಂಕ:14/12/2012**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಎಸ್.ಶಂಕರನಾರಾಯಣ ಆದ ನಾನು ಗೌರಿಬಿದನೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಎಲ್ಲಾ ಹೂವುಗಳ ಮಾರಾಟ ನಿಯಂತ್ರಣಕ್ಕಾಗಿ ಕೊಟಾಲೂದಿನ್ನೆ ಗ್ರಾಮದ ಪರಿಮಿತಿಯೊಳಗಿನ

ಪ್ರದೇಶವನ್ನು "**ಉಪ ಮಾರುಕಟ್ಟೆ**" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು "**ಉಪ ಮಾರುಕಟ್ಟೆ ಪ್ರಾಂಗಣ**" ಎಂದು ಘೋಷಿಸಿದ್ದೇನೆ.

**ಅನುಸೂಚಿ**

ಕೊಟಾಲೂದಿನ್ನೆ ಗ್ರಾಮದ ಪರಿಮಿತಿಯೊಳಗೆ ಹಾಲಿ ವ್ಯಾಪಾರ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

**ಪೂರ್ವಕ್ಕೆ** : ಶ್ರೀದಾಸಪ್ಪನವರ ಜಮೀನು
**ಪಶ್ಚಿಮಕ್ಕೆ** : ಖಾದಿ ಭಂಡಾರದವರ ಜಮೀನು
**ಉತ್ತರಕ್ಕೆ** : ಸಿಹಿನೀರಿನ ಬಾವಿಗೆ ಹೋಗುವ ರಸ್ತೆ
**ದಕ್ಷಿಣಕ್ಕೆ** : ಮಧುಗಿರಿ ರಸ್ತೆ

**ಎಸ್. ಶಂಕರನಾರಾಯಣ**
ನಿರ್ದೇಶಕರು

**PR.1607**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ಸಂಖ್ಯೆ: ಕಸಂವಾಪ್ರ 59 ಕೆಎಂಯು 2010 ಬೆಂಗಳೂರು, ದಿನಾಂಕ: 21–03–2012**

**ಅಧಿಸೂಚನೆ**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿ ಪಟ್ಟಣದಲ್ಲಿರುವ ಐತಿಹಾಸಿಕ ಮಾಗಡಿ ಕೋಟೆ ಹಾಗೂ ಕಂದಕದ ಪ್ರದೇಶವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ. ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ, 1961ರ ಕಲಂ 4(1)ರ (ಕರ್ನಾಟಕ ಆಕ್ಟ್ ಆಫ್ 1962) ಅಡಿಯಲ್ಲಿ ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಈ ಸಂಬಂಧ ಆಕ್ಷೇಪಣೆಗಳನ್ನು ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ವಿಕಾಸ ಸೌಧ, ಬೆಂಗಳೂರು–560 001 ಇವರಿಗೆ ಸಲ್ಲಿಸಬಹುದು.

ಈ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾದಿತದಾರರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರವು ಸ್ವೀಕರಿಸಿದಲ್ಲಿ ಸರ್ಕಾರವು ಅದನ್ನು ಪರಿಶೀಲಿಸಿ ಮುಂದಿನ ಕ್ರಮ ಕೈಗೊಳ್ಳುವುದು. ತಡವಾಗಿ ಸ್ವೀಕರಿಸಲಾಗುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ,
**ಎನ್. ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ(ಆಡಳಿತ ಕನ್ನಡ)

**ಪರಿವಿಡಿ**

**(ಅಧಿಸೂಚನೆ ಸಂಖ್ಯೆ; ಕಸಂವಾಪ್ರ 59 ಕೆಎಂಯು 2010 ದಿನಾಂಕ: 21–03–2012)**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಿಸಬೇಕಾದ ಸ ನಂ ಗಳು | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ರಾಮನಗರ ಜಿಲ್ಲೆ | ಮಾಗಡಿ | **ಮಾಗಡಿ ಪಟ್ಟಣ** | ಮಾಗಡಿ ಕೋಟೆ ಮತ್ತು ಕಂದಕಗಳನ್ನು ಒಳಗೊಂಡಂತೆ ಇರುವ ಪ್ರದೇಶ | ಸ.ನಂ.201<br>ಸ.ನಂ.202<br>ಸ.ನಂ.203<br>ಸ.ನಂ.205<br>ಸ.ನಂ.208<br>-------<br>**ಒಟ್ಟಾರೆ** | 2ಎಕರೆ 15ಗುಂಟೆ<br>4ಎಕರೆ 35ಗುಂಟೆ<br>0.19ಗುಂಟೆ<br>2ಎಕರೆ 05ಗುಂಟೆ<br>4 ಎಕರೆ<br>-----------<br>13 ಎಕರೆ 34 ಗುಂಟೆ | ಪೂರ್ವಕ್ಕೆ :<br>ಪಶ್ಚಿಮಕ್ಕೆ:<br>ಉತ್ತರಕ್ಕೆ:<br>ದಕ್ಷಿಣಕ್ಕೆ : | ರಸ್ತೆ<br>ರಸ್ತೆ<br>ರಸ್ತೆ<br>ರಸ್ತೆ | **ಮುಜರಾಯಿ** | ರಾಮನಗರ ಜಿಲ್ಲೆ ಮಾಗಡಿ ತಾಲ್ಲುಕು ಮಾಗಡಿ ಪಟ್ಟಣದಲ್ಲಿರುವ ಐತಿಹಾಸಿಕ ಕೋಟೆಯು 11 ಶತಮಾನ ದಿಂದ 14ನೇ ಶತಮಾನದ ನಡುವೆ ನಿರ್ಮಿತಗೊಂಡಿರುತ್ತದೆ. ಕೋಟೆ ಕಂದಕಗಳೂ ಸೇರಿದಂತೆ ಒಟ್ಟಾರೆ 13 ಎಕರೆ 34 ಗುಂಟೆಯ ಪ್ರದೇಶವನ್ನು ರಾಜ್ಯ ಸಂರಕ್ಷಿತ ಪ್ರದೇಶವೆಂದು ಘೋಷಿಸಬೇಕಾಗಿದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ,
**ಎನ್,ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ(ಆಡಳಿತ ಕನ್ನಡ)

**PR.1559**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ “ಕಂದಾಯ ಭವನ”ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:19/2012ದಿನಾಂಕ:20–08–2012**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1) ರಂಗಮ್ಮ ಪತಿ: ಲೇಟ್ ಕೃಷ್ಣಪ್ಪ ವಯಸ್ಸು 42ವರ್ಷ<br>2) ಮಂಜುನಾಥ ತಂದೆ: ಲೇಟ್ ಕೃಷ್ಣಪ್ಪ ವಯಸ್ಸು 24 ವರ್ಷ<br>3) ಲೋಕಮ್ಮ ತಂದೆ: ಲೇಟ್ ಕೃಷ್ಣಪ್ಪ ವಯಸ್ಸು 18 ವರ್ಷ<br>**ಈರ್ವರ ವಿಳಾಸ:** ಗೌಡಗೆರೆ ವಿಲೇಜ್, ಶಿರಾ ತಾಲ್ಲೂಕು ತುಮಕೂರು ಜಿಲ್ಲೆ | | 1) ಶ್ರೀಮತಿ ಕರಿಯಮ್ಮ ವೈಫ್:ಆಫ್ ಲೇಟ್ ನರಸಿಂಹಯ್ಯ, ಪ್ರಾಪ್ತರು ಗೌಡಗೆರೆ ವಿಲೇಜ್, ಶಿರಾ ತಾಲ್ಲೂಕು ತುಮಕೂರು ಜಿಲ್ಲೆ<br>2) ಯೂನೈಟೆಡ್ ಇಂಡಿಯಾ ಇನ್ಷ್ಯೂರನ್ಸ ಕಂ.ಲಿ, ಮೈಕ್ರೋ ಆಫೀಸ್, 1ನೇ ಮಹಡಿ, ಟಿ.ಕೆ.ಪಿ. ಲಾಡ್ಜ್ ಎದುರುಗಡೆ, ಎನ್.ಎಚ್–4, ಶಿರಾ–37 |

**ಪ್ರಕಟಣೆ**

1ನೇ ಅರ್ಜಿದಾರರ ಮಗ ಲೇಟ್ ಬಸವರಾಜು ಎಂಬುವವರು 1ನೇ ಪ್ರತಿವಾದಿರವರ ಟ್ರ್ಯಾಕ್ಟರ್ ಟ್ರೈಲರ್ ಸಂ:ಕೆಎ–06–ಟಿ–8855/8856 ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:06–05–2011 ರಂದು ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್**
ಆಯುಕ್ತರು ಕಾರ್ಮಿಕ ಪರಿಹಾರ ನ್ಯಾಯಾಲಯ
ತುಮಕೂರು ಜಿಲ್ಲೆ, ತುಮಕೂರು

**PR.1443**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಕುವೆಂಪು ರಸ್ತೆ, ಜಿಲ್ಲಾ ಪಂಚಾಯತ್ ಪಕ್ಕ ಶಿವಮೊಗ್ಗ

**ವಿಷಯ:** ಸಮಾಪನೆಯಲ್ಲಿರುವ ಜೈ ಸಂತೋಷಿ ಮಾತಾ ಮಹಿಳಾ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ ಇದರ ಸಮಾಪನಾಧಿಕಾರಿ ಮರುನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1. ಈ ಕಚೇರಿಯ ಆದೇಶ ನಂ, ಡಿಆರ್ಎಸ್/ ಸಮಾಪನೆ/ ಡಿಎಲ್ಎಸ್/2006–07 ದಿನಾಂಕ 31–10–2006.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪವಿಭಾಗ ಶಿವಮೊಗ್ಗ.ರವರ ಪತ್ರ ನಂ: ಸನಿ24/ಸಮಾಪನೆ/ ಸಿಆರ್–11/2012–13.ದಿನಾಂಕ:–10–05–2012
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಬ್ಬಂದಿ/74/ಇಜಿಪಿ/2012– 13. ದಿನಾಂಕ: 30–06–2012.

ಸಮಾಪನೆಯಲ್ಲಿರುವ ಜೈ ಸಂತೋಷಿ ಮಾತಾ ಮಹಿಳಾ ಗೃಹನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ: ಈ ಸಹಕಾರ ಸಂಘವನ್ನು ಉಲ್ಲೇಖ(1)ರ ಈ ಕಚೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ (ಸಿಸಿಸಿ) ಡಿಸಿಸಿ ಬ್ಯಾಂಕ್ ನಿ., ಶಿವಮೊಗ್ಗರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶಿಸಲಾಗಿತ್ತು. ಸದರಿಯವರಿಗೆ ಉಲ್ಲೇಖ(3) ರ ಸರ್ಕಾರದ ಅಧಿಸೂಚನೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ. ಈ ಹುದ್ದೆಗೆ ವರ್ಗಾವಣೆಯಾಗಿರುವುದರಿಂದ ಮತ್ತು ಉಲ್ಲೇಖ(2) ರ ಕೋರಿಕೆಯನ್ನು ಪರಿಗಣಿಸಿ, ಸಮಾಪನಾಧಿಕಾರಿಯ ಮರುನೇಮಕ ಮಾಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ಕೆ.ಜಿ ಶಾಂತರಾಜು ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ತೀರ್ಥಹಳ್ಳಿ, ರವರನ್ನು ಮರುನೇಮಕ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸಂ.ಡಿಆರ್ಎಸ್/ಸಮಾಪನೆ/ಡಿಎಲ್ಎಸ್/ 206/2006–07ದಿನಾಂಕ: 10–07–2012**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್ಎಂ 2010 ಬೆಂಗಳೂರು ದಿನಾಂಕ17–02–2011 ರಲ್ಲಿ ದತ್ತವಾದ ಅಧಿಕಾರದನ್ವಯ, ಅಶೋಕ ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಜೈ ಸಂತೋಷಿ ಮಾತಾ ಮಹಿಳಾ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ಕೆ.ಜಿ ಶಾಂತರಾಜು ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ, ತೀರ್ಥಹಳ್ಳಿ, ರವರನ್ನು ನೇಮಕ ಮಾಡಿರುತ್ತೇನೆ. ಸಮಾಪನಾಧಿಕಾರಿಯವರು ಕೂಡಲೇ ಪ್ರಭಾರ ಪಡೆದು ಬಾಕಿ ಇರುವ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿ ಸಂಘದ ನೊಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:–10–07–2012 ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಅಶೋಕ ವೆಂ. ಮೊರಬ**

ಸಹಕಾರ ಸಂಘಗಳ ಉಪನಿಬಂಧಕರು

ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

PR.1524

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಕುವೆಂಪು ರಸ್ತೆ, ಜಿಲ್ಲಾ ಪಂಚಾಯತ್ ಪಕ್ಕ ಶಿವಮೊಗ್ಗ

**ವಿಷಯ:** ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಹಳೇಸೊರಬ,ಸೊರಬ ತಾ:,ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಆದೇಶ ನಂ,ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/40/2005–06 ದಿನಾಂಕ 15–06–2006.ಮತ್ತು ದಿನಾಂಕ:–16–08–2011.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರರವರ ಪತ್ರನಂ:ಸನಿ–25/ಎಲ್‌ಕ್ಯೂಡಿ/ಸಿಆರ್–2005–06. ದಿನಾಂಕ:06–08–2012.

3) ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎ 2011 ದಿನಾಂಕ:17–02–2011

**ಪ್ರಸ್ತಾವನೆ:–**

ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಹಳೇಸೊರಬ,ಸೊರಬ ತಾ:,ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರ ಆದೇಶ ಸಂ:ಎಆರ್–25/ಎಂಕೆಟಿ/ನೊಂದಣಿ/20155/1993–94.ದಿನಾಂಕ:–31–03–1994 ರಂದು ನೊಂದಣಿಯಾಗಿ ರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ(1)ರ ಈ ಕಛೇರಿಯ ದಿನಾಂಕ:–16–08–2011 ರ ಆದೇಶದಲ್ಲಿ ಸಮಾಪನಾಧಿಕಾರಿಯಾಗಿ ನೇಮಿಸಲಾದ ಸಹಕಾರ ಅಭಿವೃದ್ದಿ ಅಧಿಕಾರಿ, ಸೊರಬ ಇವರು ದಿನಾಂಕ:21–09–2011 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕ್ಕೈಗೊಂಡಿರುತ್ತಾರೆ. ದಿನಾಂಕ:03–08–2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಈ ಕಚೇರಿಯ ದಿನಾಂಕ:–27–01–2012 ರ ಆದೇಶದಲ್ಲಿ ಪಡೆದ ಅನುಮೋದನೆಯಂತೆ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ವಿಲೇವಾರಿ ಮಾಡಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕಚೇರಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ ದಿನಾಂಕ:03–08–2012ರಂದು ನಡೆದ ಸಮಾಪನಾಧಿಕಾರಿ ಸಭೆಯ ನಡವಳಿಯಂತೆ ದಿನಾಂಕ:31–03–2011 ಕ್ಕೆ ಇದ್ದಂತೆ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯಂತೆ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ:03–08–2012 ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ:03–08–2012 ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–/2006–07. ದಿನಾಂಕ:24–08–2012.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಅಶೋಕ. ವೆಂ.ಮೊರಬ. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ (ನಿ) ಹಳೇಸೊರಬ, ಸೊರಬ ತಾ:, ಈ ಸಹಕಾರ ಸಂಘದ ನೊಂದಣಿ ಸಂ:ಎಆರ್–25/ಎಂಕೆಟಿ/ನೊಂದಣಿ/ 20155/1993–94. ದಿನಾಂಕ:–31–03–1994 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:24–08–2012 ರಂದು ನೀಡಲಾಗಿದೆ.

**ಅಶೋಕ ವೆಂ. ಮೊರಬ**

ಸಹಕಾರ ಸಂಘಗಳ ಉಪನಿಬಂಧಕರು

ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

PR.1521

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಕುವೆಂಪು ರಸ್ತೆ, ಜಿಲ್ಲಾ ಪಂಚಾಯತ್ ಪಕ್ಕ ಶಿವಮೊಗ್ಗ

**ವಿಷಯ:** ಸಮಾಪನೆಯಲ್ಲಿರುವ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ.,ಆನವಟ್ಟಿ ಸೊರಬ ತಾಲ್ಲೂಕು ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1) ಈ ಕಛೇರಿಯ ಆದೇಶ ಸಂ: ಡಿಆರ್‌ಎಸ್ /ಕಾನೂನು–3/ ಡಿಎಲ್‌ಎಸ್/45/2001–02. ದಿನಾಂಕ:29–09–2001.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರರವರ ಪತ್ರ ನಂ:ಎಆರ್–25/ಎಲ್‌ಕ್ಯೂಡಿ/2012–13. ದಿನಾಂಕ:08–05–2012.
3) ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎ 2011 ದಿನಾಂಕ:17–02–2011.

**ಪ್ರಸ್ತಾವನೆ:–**

ಸಮಾಪನೆಯಲ್ಲಿರುವ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ.,ಆನವಟ್ಟಿ. ಸೊರಬ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರ ಆದೇಶ ಸಂ:16291/1989–90 ದಿನಾಂಕ 04–08–1989ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ನೊಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಸಮಾಪನಾಧಿಕಾರಿಯಾಗಿ ನೇಮಿಸಲಾದ ಸಹಕಾರ ಅಭಿವೃದ್ಧಿ ಅಧಿಕಾರಿ, ಸೊರಬ ಇವರು ದಿನಾಂಕ:13–09–2006 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ. ದಿನಾಂಕ:03–04–2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ವಿಲೇವಾರಿ ಮಾಡಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕಚೇರಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ ದಿನಾಂಕ:03–04–2012ರಂದು ನಡೆದ ಸಮಾಪನಾಧಿಕಾರಿ ಸಭೆಯ ನಡವಳಿಯಂತೆ ದಿನಾಂಕ:31–03–2011 ಕ್ಕೆ ಇದ್ದಂತೆ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯಂತೆ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ:30–04–2012 ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ:03–04–2012 ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂ:ಡಿಆರ್‌ಎಸ್/ಕಾನೂನು–3/ಡಿಎಲ್‌ಎಸ್/45/2001–02 ದಿನಾಂಕ:31–05–2012.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಅಶೋಕ. ವೆಂ.ಮೊರಬ. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ.,ಆನವಟ್ಟಿ. ಸೊರಬ ತಾಲ್ಲೂಕು ಈ ಸಹಕಾರ ಸಂಘದ ನೊಂದಣಿ ಸಂಖ್ಯೆ:16291/1989–90 ದಿನಾಂಕ 04–08–1989ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31–05–2012 ರಂದು ನೀಡಲಾಗಿದೆ.

**ಅಶೋಕ ವೆಂ. ಮೊರಬ**
ಸಹಕಾರ ಸಂಘಗಳ ಉಪನಿಬಂಧಕರು
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**PR.1523**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಕುವೆಂಪು ರಸ್ತೆ, ಜಿಲ್ಲಾ ಪಂಚಾಯತ್ ಪಕ್ಕ ಶಿವಮೊಗ್ಗ

**ವಿಷಯ:** ನಿಷ್ಕ್ರಿಯಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೆಬ್ಬೈಲು ಹೊಸನಗರ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ,

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರರವರ ಪತ್ರನಂ:ಎಆರ್25/ಎಲ್‌ಕ್ಯೂಡಿ/ ಸಿಆರ್ 08/ 2012–13 ದಿನಾಂಕ:31–07–2012.
2) ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2010 ಬೆಂಗಳೂರು ದಿನಾಂಕ:17–02–2011

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3 Hence the following clarification is issued.

**CLARIFICATION NO.CLR.CR.131/12-13, DATED: 17.11.2012**

It is clarified that 'Reducers' are liable to tax at 5.5% from 01.08.2012 as per Sl. No.127 of the table in the notification No. FD 197 CSL 2005 (6) dated: 30.04.2005 issued under section 4(1) of the KVAT Act, 2003.

**YOGENDRA TRIPATHI**
Commissioner of Commercial Taxes,
(Karnataka), Bangalore

**PR - 1556**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:ಸಿಆರ್‌ಎಂ:43:2008–09 ದಿನಾಂಕ:2–11–2012**

**ಉಪಸ್ಥಿತರು :** **ಹೆಚ್.ಎನ್.ಆನಂದ್**,ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಕುಶಾಲನಗರ ಪೋಲಿಸ್ ಠಾಣೆ, | | ಎ.ಪಿ ಗಿರೀಶ್ ಬಿನ್ ಎ.ಪಿ.ಪೊನ್ನಪ್ಪ, ಆಟೋ ಡ್ರೈವರ್,<br>ಚಿಕ್ಕಬೆಟ್ಟಗೇರಿ ಗ್ರಾಮ, ಕುಶಾಲನಗರ |

**ಪ್ರಕರಣದ ಮುಖ್ಯಾಂಶಗಳು:–**

ದಿ:15–12–2008ರಂದು ಆರಕ್ಷಕ ಉಪ ನಿರೀಕ್ಷಕರು, ಕುಶಾಲನಗರ ಠಾಣೆ ಇವರ ಕರ್ತವ್ಯದ ಮೇರೆಗೆ ಕುಶಾಲನಗರದಿಂದ ಸಿದ್ದಾಪುರಕ್ಕೆ ಬೇಟಿ ನೀಡಿ ಸಿದ್ದಾಪುರದಿಂದ ಕುಶಾಲನಗರಕ್ಕೆ ಬರುತ್ತಿರುವಾಗ ದೊರೆತ ದೂರವಾಣಿ ಮಾಹಿತಿಯಂತೆ ಆಟೋರಿಕ್ಷಾ ಸಂ:ಕೆಎ–12–8625ರ ಆಟೋರಿಕ್ಷಾದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡುತ್ತಿರುವುದಾಗಿ ತಿಳಿಸಿದ ಮೇರೆಗೆ ಪತ್ತೆಹಚ್ಚಿ ಸದರಿ ಆಟೋರಿಕ್ಷಾದಲ್ಲಿದ್ದ ಅಕ್ರಮ ಮದ್ಯ 48+48ರಂತೆ 96 ಕ್ವಾಟರ್ ಬಾಟಲಿ ಮದ್ಯವನ್ನು ವಾಹನ ಸಮೇತ ವಶಕ್ಕೆ ತೆಗೆದುಕೊಂಡು ಮುಂದಿನ ಕ್ರಮದ ಬಗ್ಗೆ ಅಧಿಕೃತ ಅಧಿಕಾರಿಗಳ ಅನುಮತಿಯನ್ನು ಪಡೆದು ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ತದನಂತರ ವಾಹನದ ಮಾಲೀಕರಿಗೆ ದಿ:15–1–2009ರಂದು 43'ಬಿ' ರಡಿಯಲ್ಲಿ ಕಾರಣಕೇಳಿ ನೋಟೀಸ್ ನೀಡಲಾಗಿದ್ದು, ದಿ.2–2–2009 ರಂದು ವಾಹನದ ಮಾಲೀಕರು ಅವರ ಪರ ವಕೀಲರಿಂದ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ರೂ.22000/(ಇಪ್ಪತ್ತೆರಡು ಸಾವಿರ)ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಮಧ್ಯಂತರಿಕವಾಗಿ ಬಿಡುಗಡೆ ಮಾಡಲಾಗಿರುತ್ತದೆ.

ತದನಂತರ ಪ್ರಕರಣ ವಿಚಾರಣೆಯನ್ನು ಪ್ರಾರಂಬಿಸಲಾಗಿದ್ದು ದಿ:29–6–2009ರ ಆದೇಶದಂತೆ ವಾಹನದ ಮಾಲೀಕರು ಷರತ್ತುನ್ನು ಪಾಲಿಸದೆ ವಿಚಾರಣೆಗೂ ಸಹ ವಾಹನದೊಂದಿಗೆ ಹಾಜರಾಗದೆ ಷರತ್ತು ಉಲ್ಲಂಘನೆ ಮಾಡಿರುವ ಕಾರಣದಿಂದ ದಿ:21–11–2011ರಂದು ವಾಹನ ಮತ್ತು ಬ್ಯಾಂಕ್ ಗ್ಯಾರಂಟಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿತ್ತು. ಈ ಸಂಬಂಧವಾಗಿ ವಾಹನದ ಮಾಲೀಕರು ಘನ ಸೆಷನ್ಸ್ ನ್ಯಾಯಾಲಯದಲ್ಲಿ ಕ್ರಿ.ಅಪೀಲುಸಂ:45/11ರಂತೆ ದಿ:12–7–12ರಂದು ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ವಿಚಾರಣೆಯನ್ನು ನಡೆಸಿ ಪ್ರಾಧಿಕಾರದ ಮುಟ್ಟುಗೋಲು ಆದೇಶವನ್ನು ವಜಾಗೊಳಿಸಿ ಆದೇಶ ನೀಡಿರುತ್ತದೆ. ಈ ಸಂಬಂಧ ಪ್ರಕರಣವನ್ನು ಜಿಲ್ಲಾ ಸತ್ರನ್ಯಾಯಾಲಯ ಮಡಿಕೇರಿ ಇವರ ದಿ:12–7–12ರ ಆದೇಶಕ್ಕೆ ಅನುಗುಣವಾಗಿ ಪುನರ್‌ಪ್ರಾರಂಭಿಸಿ ವಾಹನದ ಮಾಲೀಕರಿಗೆ ಕಾನೂನಿನ ಅನ್ವಯ ದಿ:3–8–12ರಂದು ವಿಚಾರಣೆಯನ್ನು ನಿಗಧಿಪಡಿಸಲಾಗಿತ್ತು. ಸದರಿ ದಿನಾಂಕದಂದು ವಾಹನದ ಮಾಲೀಕರು ಹಾಜರಾಗಿ ಪ್ರಕರಣವನ್ನು ನಡೆಸುವ ಬಗ್ಗೆ ಸಮಯಾವಕಾಶವನ್ನು ಕೋರಿರುತ್ತಾರೆ. ಅವರ ಕೋರಿಕೆಯಂತೆ ಸಮಯಾವಕಾಶ ನೀಡಿ ದಿನಾಂಕ:3–10–12 ಕ್ಕೆ ನಿಗಧಿಪಡಿಸಲಾಯಿತು. ಸದರಿ ದಿನದಂದು ವಾಹನದ ಮಾಲೀಕರು ಮತ್ತೆ ಪುನ: ಸಮಯ ಕೋರಿದ್ದು ದಿ:2–11–12ಕ್ಕೆ ಮುಂದೂಡಲಾಗಿತ್ತು. ದಿ:2–11–12ರಂದು ವಾಹನದ ಮಾಲೀಕರು, ತನಿಖಾಧಿಕಾರಿಗಳು ಮತ್ತು ಮಾಲೀಕರ ಪರ ವಕೀಲರು ಹಾಜರಿದ್ದು ಪ್ರಾಧಿಕಾರದ ಮುಂದೆ ವಕಾಲತು ಮತ್ತು ಮೆಮೋ ನೀಡಿ ಈಗಾಗಲೆ ವಾಹನದ ಮಾಲೀಕರು ವಾಹನದ ಮೌಲ್ಯಕ್ಕೆ ಸಮನಾಗಿ ನೀಡಿರುವ ರೂ.22000/(ಇಪ್ಪತ್ತೆರಡು ಸಾವಿರ) ಸಾವಿರವನ್ನು ಸರಕಾರಕ್ಕೆ ತೆಗೆದುಕೊಂಡು ವಾಹನದ ಮೇಲಿನ ಪ್ರಕರಣವನ್ನು ಮುಕ್ತಾಯಗೊಳಿಸಿ ಕೊಡಬೇಕಾಗಿ ಪ್ರಾರ್ಥಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ವಾಹನದ ಮಾಲೀಕರು ನೀಡಿರುವ ವಾಹನದ ಮೌಲ್ಯಕ್ಕೆ ಸಮನಾದ ರೂ.22,000/ (ಇಪ್ಪತ್ತೆರಡು ಸಾವಿರ)ಗಳ ಬ್ಯಾಂಕ್ ಗ್ಯಾರಂಟಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸರಕಾರಕ್ಕೆ ಹೊಂದಾಣಿಕೆ ಮಾಡಿಕೊಂಡು ಪ್ರಕರಣವನ್ನು ಮುಕ್ತಾಯ ಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ನೀಡಿರುತ್ತೇನೆ.

**ಆದೇಶ ಸಂ:ಇಎಕ್ಸ್‌ಇ:ಸಿಅರ್‌ಎಂ:43:2008–09, ದಿ:2–11–2012.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಾಹನದ ಮಾಲೀಕರು ದಿನಾಂಕ:2–11–12ರಂದು ನೀಡಿರುವ ಕೋರಿಕೆಯಂತೆ ಹಾಗೂ ನ್ಯಾಯಾಲಯದ ದಿ:12–7–12ರ ಆದೇಶದಂತೆ ವಾಹನದ ಮಾಲೀಕರು ಈಗಾಗಲೆ ನೀಡಿರುವ ವಾಹನದ ಮೌಲ್ಯಕ್ಕೆ ಸಮನಾದ ರೂ.22,000/ (ಇಪ್ಪತ್ತೆರಡು ಸಾವಿರ)ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸರಕಾರಕ್ಕೆ ಹೊಂದಾಣಿಕೆ ಮಾಡಿಕೊಂಡು ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶ ನೀಡಿರುತ್ತೇನೆ.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ

**PR - 1579**